# ಕೊಡಗು  ಸಂಗಾತಿ

ಜುಲೈ 1 ರಿಂದ 31, 2002 | ಪಾಕ್ಷಿಕ ಪತ್ರಿಕೆ | ( ಕಾರ್ತಿಂಗ 16-31, ಆಟಿ 1-15 )

1055c, ದೊಡ್ಡಣ್ಣ ಬಿಲ್ಡಿಂಗ್ಸ್, ಹುಣಸೂರು ರಸ್ತೆ, ಹಿನ್‌ಕಲ್ ಅಂಚೆ, ಮೈಸೂರು - ೫೭೦ ೦೧೭

ಸಂಪಾದಕಿ : ಪಟ್ಟಡ ಶೀಲಾಮಣಿ Registered : 10-01-96 TCI Kar. 09592 ಕನ್ನಡ ಮತ್ತು ಅರೆಗನ್ನಡ ಭಾಷೆಲಿ ಪ್ರಕಟಿತ

Reg. No. KA/SK/MYS-88 ಸಂಪುಟ : 6 ಸಂಚಿಕೆ : 7-8 ಪುಟಗಳು : 24 ಬೆಲೆ ರೂ. : 12-00




## "ಸೀತೆ ಹೂ"

ಲೇಖನ : ಒಳಪುಟದಲ್ಲಿ.

## ಪಶ್ಚಿಮ ಘಟ್ಟ ಪ್ರದೇಶದಲ್ಲಿ ಮಾತ್ರ ಮಳೆಗಾಲದಲ್ಲಿ ಕಾಣಸಿಗುವ "ಸೀತೆ ಹೂ" ನೋಡಲು ಬಲು ಚೆಂದ

## ಪ್ರಕಟಣೆ

ಕೊಡಗು ಸಂಗಾತಿ ಪತ್ರಿಕೆಯ ಚಂದ ಹಣವು ವಸೂಲಾಗದೆ ಬಹಳಷ್ಟು ಬಾಕಿ ಇದೆ. ಈ ಹಿಂದೆಯು ಸಹ ಹಲವು ಸರ್ತಿ ಬಾಕಿದಾರರಿಗೆ ಪತ್ರಿಕೆಯನ್ನು ನಿಲ್ಲಿಸಲಾಗಿದೆ. ಇತ್ತೀಚೆಗೆ 31-3-2002 ಕ್ಕೆ ನಿಲ್ಲಿಸಲಾಗಿದೆ. ಚಂದ ಉಳ್ಸಿಕೊಂಡಿರುವ ಸನ್ಮಾನ್ಯರಿಗೆ ಸಾಕಷ್ಟು ಬಾರಿ ತಿಳಿಸಿದ್ದರೂ ಸಹ ಹಣ ವಸೂಲಾತಿ ಆಗಿಲ್ಲ. ಹಣ ಬಾರದ್ದವರ ಪಟ್ಟಿಯನ್ನು ಪ್ರತ್ಯೇಕವಾಗಿ ಇಡಲಾಗಿದೆ. ಬಾಕಿ ಉಳಿಸಿಕೊಂಡಿರುವ ಸಂಗಾತಿ ಪತ್ರಿಕೆಯ ಋಣ (ಉಳಿಕೆ)ವನ್ನು ಕೂಡಲೆ ಕಳುಹಿಸಿ ಸಂಗಾತಿ ಉಳಿಯು ಮತ್ತು ಅಭಿವೃದ್ಧಿಗೂ ಸಹಕರಿಸುವಂತೆ ಮಹಾಜನತೆಯಲ್ಲಿ ವಿಜ್ಞಾಪನೆ. ಪತ್ರಿಕೆಗೆ ಲೇಖನ ಕಳುಹಿಸುವಾಗ ಅಂಚೆ ಮೂಲಕ ಕಳುಹಿಸುವಂತೆ ನಿವೇದನೆ. ಕೋರಿಯರ್ ಸರ್ವೀಸ್ ಸರಿಯಾಗಿ ತಲಪುತ್ತಿಲ್ಲ. ದಯವಿಟ್ಟು ಸಹಕರಿಸಿ.

ಪಟ್ಟಡ ಶೀಲಾಮಣಿ

- ಸಂಪಾದಕಿ

## ಶುಭ ವಿವಾಹ

1. ಮೈಸೂರು ನಿವಾಸಿ ಪಟ್ಟಡ ಜಯರಾಮ್ ಮತ್ತು ಪೂವಮ್ಮ ದಂಪತಿಗಳ ಸುಪುತ್ರಿ ದಿವ್ಯಶ್ರೀಗೂ ಹಾಗೂ ಮಡಿಕೇರಿ ನಿವಾಸಿ ಪೊನ್ನಚನ ಸೋಮಣ್ಣನವರ ಮಗ ಶಶಿಕಾಂತ್‌ಗೂ ದಿನಾಂಕ 5-6-2002ರಲ್ಲಿ ಮಡಿಕೇರಿ ಕೆಳಗಿನ ಗೌಡ ಸಮಾಜದಲ್ಲಿ ಬಾರಿ ವಿಜೃಂಭಣೆಯಿಂದ ಕಳೆಯಿತು.
2. ಕುಶಾಲನಗರ ನಿವಾಸಿ ಪೊಡಲೋಳನ ಬೆಳ್ಳಪ್ಪನವರ ಮಗ ನಂದನಿಗೂ ಮತ್ತು ಮಡಿಕೇರಿ ನಿವಾಸಿ ಮುಕ್ಕಾಟೀರ ವಾಸುದೇವನವರ ಪುತ್ರಿ ರೇಖಾಳಿಗೂ ದಿನಾಂಕ 13-6-2002 ರಲ್ಲಿ ಮಡಿಕೇರಿಯ ಮೇಲಿನ ಕೊಡವ ಸಮಾಜದಲ್ಲಿ ಚೆನ್ನಾಗಿ ಕಳೆಯಿತು ಎಂದು ತಿಳಿದು ಬಂದಿದೆ.
3. ಮಡಿಕೇರಿ ನಿವಾಸಿ ಪಟ್ಟಡ ದೇವಯ್ಯನವರ ಮಗಳು ಶೋಭಾಳಿಗೂ ಹಾಗೂ ಕೈಕೇರಿ ನಿವಾಸಿ ಪಡಿಕಲು ಚಂಗಪ್ಪನವರ ಮಗ ನಿರಂಜನ್‌ಗೂ ದಿನಾಂಕ16-6-2002ರಲ್ಲಿ ಮಡಿಕೇರಿ ಕೆಳಗಿನ ಗೌಡ ಸಮಾಜದಲ್ಲಿ ವಿಜೃಂಭಣೆಯಿಂದ ಕಳೆಯಿತು.

## ಅಭಿನಂದನೆ

2001-2002ನೇ ಸಾಲಿನ 10ನೇ ತರಗತಿ ಪಬ್ಲಿಕ್ ಪರೀಕ್ಷೆಯಲ್ಲಿ ಮೈಸೂರಿನ ಡೆಮೋಸ್ಟ್ರೇಷನ್ ಮಲ್ಟಿ ಪರ್ಪೊಸ್ ಶಾಲೆಯ ವಿದ್ಯಾರ್ಥಿ ಕುಮಾರಿ ತಶ್ಮಿ ಯಂ.ಟಿ. (ತೀರ್ಥ) 87.4% (C.B.S.E.) ಅಂಕಗಳಿಸಿ ತೇರ್ಗಡೆ ಹೊಂದಿದ್ದಾಳೆ. ಇವಳು ಮೂಲತಃ ಮರಂದೊಡ ಗ್ರಾಮದ ಮುಕ್ಕಾಟಿ ತಮ್ಮಯ್ಯ ಮತ್ತು ಲತಾ ದಂಪತಿಗಳ ಪುತ್ರಿ ಆಗಿರುತ್ತಾಳೆ.

## ಉಚಿತ ಪೋಟೋಗ್ರಫಿ, ವಿಡಿಯೋಗ್ರಫಿ ತರಭೇತಿಗೆ ಅರ್ಜಿ ಆಹ್ವಾನ

ಮೈಸೂರು ನಗರದ ರುಡ್ ಸೆಟ್ ಸಂಸ್ಥೆಯು ಉಚಿತ ಫೋಟೋಗ್ರಫಿ ಮತ್ತು ವಿಡಿಯೋಗ್ರಫಿ ತರಭೇತಿಗಾಗಿ ಅರ್ಜಿ ಆಹ್ವಾನಿಸಿದೆ. ತರಬೇತಿಯು ಜುಲೈ ೧೩ ರಿಂದ ಆರಂಭವಾಗಲಿದ್ದು, ತರಭೇತಿ ಅವಧಿಯಲ್ಲಿ ಉಚಿತ ಊಟ, ವಸತಿ ಸೌಲಭ್ಯ ಕಲ್ಪಿಸಲಾಗುವುದು. ಮೈಸೂರು, ಮಂಡ್ಯ ಹಾಗೂ ಚಾಮರಾಜನಗರ ಜಿಲ್ಲೆಯ ೧೮ ರಿಂದ ೩೫ ರ ವಯೋಮಿತಿಯ ಬರೆಯಬಲ್ಲ ಸ್ವ-ಉದ್ಯೋಗದಲ್ಲಿ ಆಸಕ್ತಿಯುಳ್ಳ ನಿರುದ್ಯೋಗಿಗಳು ಪೂರ್ಣ ವಿವರಗಳೊಡನೆ ೫ ರೂ. ಅಂಚೆ ಚೀಟಿಯ ಸ್ವ-ವಿಳಾಸವುಳ್ಳ ಲಕೋಟೆಯನ್ನು ಲಗತ್ತಿಸಿ ನಿರ್ದೇಶಕರು, ರುಡ್ ಸೆಟ್ ಸಂಸ್ಥೆ, ಮುಖ್ಯ ರಸ್ತೆ, ಹಿನಕಲ್, ಮೈಸೂರು - ೫೭೦೦೧೭ ಕಳುಹಿಸಬಹುದಾಗಿದೆ ಎಂದು ಪ್ರಕಟಣೆಯೊಂದು ತಿಳಿಸಿದೆ.

## ಗೌಡ ವಿದ್ಯಾಸಂಘದ ನೆರವು

ಮಡಿಕೇರಿ ಸಮೀಪದ ಮದೆ ಮಹೇಶ್ವರ ವಿದ್ಯಾಸಂಸ್ಥೆಗೆ ಶೈಕ್ಷಣಿಕ ನೆರವಿನ ರೂಪದಲ್ಲಿ ಕೊಡಗು ಗೌಡ ವಿದ್ಯಾಸಂಘವು ರೂ.4500 ಮೊತ್ತವನ್ನು ನೀಡಿದೆ. ಅಲ್ಲದೆ, ವಿದ್ಯಾಸಂಸ್ಥೆಯಿಂದ ಎಸ್. ಎಸ್. ಎಲ್. ಸಿ. ಮಕ್ಕಳಿಗೆ ವಿಶೇಷ ತರಗತಿಗಳನ್ನು ನಡೆಸಲು ಸಹಕಾರ ಹಸ್ತ ದೊರೆತಿರುವುದಾಗಿ ಶಾಲಾ ಪ್ರಕಟಣೆ ತಿಳಿಸಿದೆ.

## ಮಾಜಿ ಸೈನಿಕರ ಕಲ್ಯಾಣಕ್ಕಾಗಿ "ಸುವಿಧಾ"

ಭಾರತೀಯ ಭೂ ಸೇನೆಯ ಕ್ಷೇತ್ರ ಮುಖ್ಯಾಲಯವು 'ಸುವಿಧಾ' ಎಂಬ ಶೀರ್ಷಿಕೆಯಲ್ಲಿ ಮೂರು ಯೋಜನೆಗಳನ್ನು ಮಾಜಿ ಸೈನಿಕರ ಹಾಗೂ ಅವಲಂಬಿತರ ಕಲ್ಯಾಣಕ್ಕಾಗಿ ರೂಪಿಸಿದೆ. ಮಾಜಿ ಯೋಧರ ಗೌರವ ಪೂರ್ಣ ಅಂತಿಮ ಕ್ರಿಯೆಗಾಗಿ 'ಸಹಯೋಗ' ಬೆಳಗಾವಿಯ ಮಿಲಿಟರಿ ಆಸ್ಪತ್ರೆಯಲ್ಲಿ 'ಸುವಿಧಾ ಸದನ' ಎಂಬ ವಿಶ್ರಾಂತಿ ಗೃಹ ಮತ್ತು ಯೋಧರ ವಿಧವೆಯರಿಗೆ 'ಪಾಮ್ ಗ್ರೂಪ್ ವಿಧವಾ ಯೋಜನೆ' ಎಂಬ ಕಾರ್ಯಕ್ರಮಗಳನ್ನು ರೂಪಿಸಿದೆ. ಸಹಯೋಗ ಕಾರ್ಯಕ್ರಮವು ಸಬ್ ಏರಿಯಾ ಅಥವಾ ಎನ್‌ಸಿಸಿ ಯೂನಿಟ್ಟುಗಳು ನಡೆಸುತ್ತಿರುವ ಸಿಎಸ್‌ಡಿ ಕ್ಯಾಂಟೀನ್ ಮುಖಾಂತರ ಕಾರ್ಯಗತಗೊಂಡಿದೆ ಹಾಗೂ ವಿಧವೆಯರಿಗೆ ಆಡಳಿತಾತ್ಮಕ ಸಹಕಾರವನ್ನು ಸಂಚಾರಿ ಸೇವಾ ತಂಡಗಳು ನೀಡುವುದು. ಹೆಚ್ಚಿನ ಮಾಹಿತಿಯನ್ನು ಜಿಲ್ಲಾ ಸೈನಿಕ ಮಂಡಳಿ ಅಥವಾ ಸಬ್ ಏರಿಯಾ ಇಲ್ಲವೇ ಸಬ್ ಏರಿಯಾ ವತಿಯಿಂದ ನಡೆಸಲಾಗುತ್ತಿರುವ ಕ್ಯಾಂಟೀನ್‌ಗಳಿಂದ ಪಡೆಯಬಹುದಾಗಿದೆ.

- ಸಂಗಾತಿ



# 2002, ಜುಲೈ 1 ರಿಂದ 31ರ ತನಕ

ಒಳನೋಟ 




| | |
|---|---|
|  ಚಂದಾ ಕಳುಹಿಸುವ ಮತ್ತು ಜಾಹೀರಾತು ಪ್ರಸಾರ ಕಛೇರಿ | **ಕೊಡಗು ಸಂಗಾತಿ,** 1055c, ದೊಡ್ಡಣ್ಣ ಬಿಲ್ಡಿಂಗ್, ಹುಣಸೂರು ರಸ್ತೆ, ಅಂಚೆ ಕಛೇರಿ ಎದುರು, ಹಿನಕಲ್ ಅಂಚೆ, ಮೈಸೂರು - 17.ಫೋನ್:0821/404290 |
|  ಮಡಿಕೇರಿಯಲ್ಲಿ ಸಂಗಾತಿ ಕಛೇರಿ ಚಿಪ್ಪೆ, ಹಸೆಮಣೆ / ಶುಭಾಶಯ ಕಾರ್ಡ್ಸ್ / ಕ್ಯಾಸೆಟ್ಸ್ ಕೀ ಚೈನ್ ಲಭ್ಯ | ಬೈತಡ್ಕ ಜಾನಕಿ ಬೆಳ್ಯಪ್ಪ,,ನಂ. 21-16 ಎಲ್. ಐ. ಸಿ. ಹತ್ತಿರ, ರೇಸ್ ಕೋರ್ಸ್ ರಸ್ತೆ, ಮಡಿಕೇರಿ, ಫೋನ್ : 08272/228047 |
| | ಚೆರಿಯಮನೆ ರಮೇಶ್, C/o ಪಾಂಡ್ಯನ್ ಕ್ಯಾಸೆಟ್ ಅಂಗಡಿ, ಖಾಸಗಿ ಬಸ್ ನಿಲ್ದಾಣ, ಮಡಿಕೇರಿ, ಫೋನ್ : 08272/229620 |
|  ವಿರಾಜಪೇಟೆ | ಬಾರಿಕೆರ ಮನೋಜ್‌ಕುಮಾರ್, ಇಗ್ಗುತ್ತಪ್ಪ ಕೋಲ್ಡ್ ಸ್ಟೋರ್, ಖಾಸಗಿ ಬಸ್ ನಿಲ್ದಾಣ, ವೀರಾಜಪೇಟೆ ಫೋನ್ : 08274/456591 |
|  ಕುಶಾಲ ನಗರ | ಕುಂಭಗೌಡನ ಸೋಮಣ್ಣ, ಮಯೂರ ಕೋಲ್ಡ್ ಸ್ಟೋರೇಜ್, ಮುಖ್ಯ ರಸ್ತೆ, ಕುಶಾಲನಗರ - 571 234 ಫೋನ್ : 08276/673370 |
|  ಬೆಂಗಳೂರು ಮಹಾನಗರ | ಕಲ್ಲುಮುಟ್ಲು ಬಸಪ್ಪ, ನಂ. 37, 3ನೇ ಮೇನ್, ನಂಜಪ್ಪ ಬ್ಲಾಕ್, ಕೆಂಪೇಗೌಡ ನಗರ, ಬೆಂಗಳೂರು -19, ಫೋನ್ : 080/6500946 |

ಚಂದಾ ವಿವರ : ಜೀವಾವಧಿ ಸದಸ್ಯತನ - 2000 ರೂ., ಬಿಡಿ ಪ್ರತಿ - 12ರೂ.

ವಾರ್ಷಿಕ ಚಂದಾ - 150 ರೂ. (ಅಂಚೆ ವೆಚ್ಚ ಸೇರಿ), ಒಲೆಗೊಂದರಂತೆ ಸದಸ್ಯರಾಗಿ ಕೊಂಡು ಓದಿ.

# ಸಂಪಾದಕೀಯ : ಕೊಡಗು ಮತ್ತು ಮಂಡ್ಯ ಜಿಲ್ಲೆಯ ಜನರ ಸ್ನೇಹ ಸಂಬಂಧ ಕೂಟ

ಕೊಡಗು ಮತ್ತು ಮಂಡ್ಯ ಜಿಲ್ಲೆಗಳ ಸ್ನೇಹ ಸಂಬಂಧ ಕೂಟವು ಈ ಎರಡು ಜಿಲ್ಲೆಗಳ ಜನರ ಪ್ರೀತಿ ವಿಶ್ವಾಸವನ್ನು ಹೆಚ್ಚಿಸುವುದಕ್ಕೆ ನಾಂದಿಯಾಗಿದೆ. ಮಂಡ್ಯ ಜಿಲ್ಲೆಯವರು, ಕೊಡಗಿನಲ್ಲಿ ಹುಟ್ಟಿ ಕನ್ನಂಬಾಡಿ ಕಟ್ಟೆಯ ಮೂಲಕ ತಮ್ಮ ಜಿಲ್ಲೆಗಾಗಿ ಹರಿದು ಕಾವೇರಿ ನದಿಯ ನೀರನ್ನು ಸದುಪಯೋಗ ಪಡಿಸಿ ನೀರಿನ ಕ್ಷಾಮದಿಂದ ಬಳಲುತ್ತಿದ್ದ ಜಿಲ್ಲೆಯಲ್ಲಿ ಭತ್ತ ಮತ್ತು ಕಬ್ಬು ಬೆಳೆಯುವ ಫಲವತ್ತಾದ ನೆಲವಾಗಿ ಪರಿವರ್ತಿಸಿ ಕರ್ನಾಟಕದ ಭತ್ತ ಮತ್ತು ಕಬ್ಬುವಿನ ಕಣಜವೆಂದು ಕರೆಸಿ ಕೊಂಡಿರುವುದು ಎಲ್ಲರಿಗೂ ಸಂತೋಷದ ವಿಷಯವಾಗಿದೆ. ಅಲ್ಲದೆ ಮಂಡ್ಯ ಜಿಲ್ಲೆಯ ಜನರು ಈ ಸೌಕರ್ಯಗಳಿಂದ ಹೆಚ್ಚಿನ ಸಂಪದ್ಭರಿತ ರೈತರಾಗಿ ಮುಂದುವರಿದು ಕರ್ನಾಟಕದ ಪ್ರಗತಿಯಲ್ಲಿ ಹೆಚ್ಚಿನ ಪಾಲುದಾರರಾಗಿ ರಾಜ್ಯದ ರಾಜಕೀಯದಲ್ಲಿ ಪ್ರಮುಖ ಪಾತ್ರವನ್ನು ವಹಿಸುತ್ತಿದ್ದಾರೆ. ಹೀಗಾಗಿ ಕಾವೇರಿ ಮಾತೆಯ ಆಶೀರ್ವಾದದಿಂದ ಅವರ ಶ್ರೇಯಸ್ಸು ಆಗಿದೆ. ಮಂಡ್ಯ ಜನತೆ ಈ ರೀತಿ ಪ್ರಗತಿಯನ್ನು ಹೊಂದಲು ಕಾರಣೀಭೂತಳಾದ ಶ್ರೀ ಶ್ರೀ ಶ್ರೀ ಕಾವೇರಿ ಮಾತೆಗೆ ಈಗ್ಗೆ ಒಂದೆರಡು ವರ್ಷಗಳಿಂದ ತಲಕಾವೇರಿ ಕ್ಷೇತ್ರದಲ್ಲಿ ತುಲಾ ಸಂಕ್ರಮಣದಂದು ಅನ್ನದಾನದಂತಹ ಅನ್ನ ಸಂತರ್ಪಣೆ ಕಾರ್ಯಕ್ರಮವನ್ನು ಹಮ್ಮಿಕೊಂಡು ದೇವಿ ಕಾರ್ಯ ಮಾಡುತ್ತಿರುವುದು ನಿಜಕ್ಕೂ ಶ್ಲಾಘನೀಯ ಕಾರ್ಯವೆನ್ನಬೇಕು.

ಹೀಗಿರುವ ಈ ಪರಿಸ್ಥಿತಿಯಲ್ಲಿ ಶ್ರೀ ಶ್ರೀ ಶ್ರೀ ಕಾವೇರಿ ಮಾತೆಯು ಹುಟ್ಟುವ ಸ್ಥಳವಾದ ತಲಕಾವೇರಿ ಮತ್ತು ಭಾಗಮಂಡಲಗಳಿಗೆ ತಮ್ಮ ಕೈಲಾದ ಸಹಾಯ ಮಾಡಿ ಆ ಸ್ಥಳಗಳ ಅಭಿವೃದ್ಧಿಗೆ ಹಾಗೂ ದೇವಸ್ಥಾನಗಳ ಜೀರ್ಣೋದ್ಧಾರಕ್ಕೂ ಗಮನ ಹರಿಸಿದರೆ ಮಂಡ್ಯ ಜನತೆಯ ಭಾಗ್ಯಲಕ್ಷ್ಮಿಯಾದ ಶ್ರೀ ಶ್ರೀ ಶ್ರೀ ಕಾವೇರಿ ಮಾತೆಗೆ ನಿಜವಾದ ಭಕ್ತಿಯನ್ನು ತೋರಿಸುವಂತಾಗುವುದೆಂದು ಸಂಗಾತಿಯ ಅಭಿಪ್ರಾಯವಾಗಿದೆ.

---

## ವಿಜ್ಞಾನಿ ಕಲಾಂ ಈಗ ಸಂಭಾವ್ಯ ರಾಷ್ಟ್ರಪತಿ :-

ಭಾರತೀಯ ರಾಜಕಾರಣೆಗಳಲ್ಲಿ ಪ್ರಜಾಪ್ರಭುತ್ವದ ಉಚ್ಚ ಬೆಳವಣಿಗೆ ಸಂಕೇತವಾಗಿ ಖ್ಯಾತ ಅಣು ವಿಜ್ಞಾನಿ ಡಾ||ಅಬ್ದುಲ್ ಕಲಾಂನವರನ್ನು ಆಡಳಿತ ಪಕ್ಷವಾದ NDA ಮತ್ತು ವಿಪಕ್ಷಗಳೂ ಸೇರಿ ರಾಷ್ಟ್ರಪತಿಗಾದಿಗೆ ಸೂಚಿಸಿದ್ದು ಭಾರತದ ಶುಭಸಂಕೇತೆಂದು ಕಂಡುಬರುತ್ತದೆ.

ರಾಷ್ಟ್ರದ ರಾಜಕೀಯದಲ್ಲಿ ಇದೊಂದು ಹೊಸ ತಿರುವು ಆಗಿದೆ. ರಾಷ್ಟ್ರದ ಅತಿ ಉನ್ನತ ಸ್ಥಾನದಲ್ಲಿ ಯಾವ ರಾಜಕೀಯ ಬಣಕ್ಕೂ ಸೇರದ ವ್ಯಕ್ತಿಯನ್ನು ರಾಷ್ಟ್ರಪತಿಯಾಗಿ ಸೂಚಿಸಿರುವುದು ಭಾರತೀಯ ಪ್ರಜಾಪ್ರಭುತ್ವವನ್ನು ಎತ್ತಿ ತೋರಿಸುತ್ತದೆ. ಯಾವ ರಾಜಕೀಯ ಬಣಕ್ಕೂ ಸೇರದಿರುವ ವ್ಯಕ್ತಿಯಿಂದ ನಿಷ್ಪಕ್ಷಪಾತವಾದ ನಿರ್ವಹಣೆಯನ್ನು ಜನತೆ ಎದುರು ನೋಡುತ್ತಿದೆ. ಇದರಿಂದಾಗಿ ರಾಜಕೀಯದ ದೊಂಬರಾಟಕ್ಕೆ ಎಡೆಯಿಲ್ಲದಾಗಿದೆ. ಭಾರತ ದೇಶದಲ್ಲಿ ಹುಟ್ಟಿ ಅರ್ಥಾತ್ ಅಪ್ಪಟ ಭಾರತೀಯನಾಗಿ, ಭಾರತವನ್ನು ತುಂಬು ಹೃದಯದಿಂದ ಪ್ರೀತಿಸುವವನಾಗಿ ಭಾರತವನ್ನು ಕೀಳರಿಮೆಯಿಂದಲೂ, ಸ್ವಂತಿಕೆಯಿಂದಲೂ ತನ್ನತನದಿಂದಲೂ ಮೆರೆಯಲು ಮೂಲತ ಅಣು ವಿಜ್ಞಾನಿಯಾಗಿ ಈಗ ಸಂಭಾವ್ಯ ರಾಷ್ಟ್ರಪತಿ ಆಯ್ಕೆಗೆ ಹೆಸರಿಸಿರುವುದು ಭಾರತೀಯರಾದ ನಾವೆಲ್ಲರೂ ಹೆಮ್ಮೆ ಪಡುವ ವಿಷಯವೆಂದು ಸಂಗಾತಿ ಬಯಸುತ್ತದೆ.

## ಜಾಯಿಂಟ್ ಎಕೌಂಟ್

ಒಂದ್ ದಿನ ಪಾಂಡಿಮನೆ ಅಜ್ಜಿ ಸಿಂಡಿಕೇಟ್ ಬ್ಯಾಂಕಿಗೆ ಬಂದ್ ಮ್ಯಾನೇಜರ್ ಹತ್ರ ಹೋಗಿ ಹಿಂಗೆ ಕೇಳ್ದೆ. ಸ್ವಾಮಿ, ನಾನ್ ಮತ್ತೆ ನಮ್ಮವು ಇಬ್ಬರ್ ಸೇರಿಕ್ಕಂಡ್ "ಜಾಯಿಂಟ್ ಅಕೌಂಟ್" ಮಾಡಕ್ಕು. ಜಾಯಿಂಟ್ ಅಕೌಂಟು ಅಂದರೆ ಏನ್ ಸ್ವಾಮಿತ ಕೇಳ್ದೆ. ಅದಿಕ್ಕೆ ಮ್ಯಾನೇಜರ್ ಹೇಳ್ತ್, ಗಂಡ ಹೆಂಡತಿ ಜಾಯೆಂಟ್ ಆಗಿ ಅಕೌಂಟು ಸುರು ಮಾಡ್ತುತ್ತೆಳ್ದ್‌ರೆ ಗಂಡಯಾಗೋಳು ಬ್ಯಾಂಕಿಗೆ ಬಂದ್ ದುಡ್ಡು ಹಾಕುದು ಮತ್ತೆ ಹೆಂಡತಿ ಮನ್ಸ್‌ಬಾಕನ ಅದನ್ನ ತೆಗ್ದ್ ಖರ್ಚು ಮಾಡ್ತ ಇರ್ದು. ನಿಮಿಗೆ ಅರ್ಥ ಆತಲ್ಲಾತ ಕೇಳ್ದೆ. ಅಜ್ಜಿಗೆ ಬಾರಿ ಖುಷಿಯಾಗಿ ಮನೆಗೆ ಹೋರ್ಟ್ ಬಾಕನ ಯಾವುದೊ ರಾಗಲಿ ಸಣ ಸ್ವರಲಿ ಸೋಬಾನೆ ಹಾಡಿಕಂಡ್ ಕಾವೇರಿ ಹೊಳೆದ್ ಪಾಲ ದಾಟಿಕ್ಕಂಡ್ ಇರ್ಕನ ಕಾಲ್ ಜಾರಿ ದೊಡ್ಡ ಮಳೇಲಿ ಕೊಚ್ಚಿ ಹೋದೆ. ಅಜ್ಜಂಗೆ ಗೊತ್ತಾಗಿ ಹೇಳ್ದೆ 'ನೋಡಿ ಜಾಯಿಂಟ್ ಅಕೌಂಟು ಅಂದರೆ ಹಿಂಗೆ. ಯಾಕೆ ಬೇಕಿತ್ತ್ ವಳಿಗೆ ಅದ್?'

- ಪಾಣತ್ತಲೆ ನಂಜಪ್ಪ, ಬೆಂಗಳೂರು.

---

ಊಟ ಕೆಟ್ರೆ ದಿವಸ ಕೆಡ್ತು, ಹೆಂಡತಿ ಕೆಟ್ರೆ ಜನ್ಮ ಕೆಡ್ತು.

# ಕಲಾಂ ಆಯ್ಕೆ ಸೂಕ್ತ

## ವಾಜಪೇಯಿ ಒಳ್ಳೆಯ ಬೇಟೆಗಾರ : ಒಂದೆ ಗುಂಡಿಗೆ 25 ಹಕ್ಕಿಗಳು

ಡಾ. ಎಪಿಜೆ ಅಬ್ದುಲ್ ಕಲಾಂ ಅವರು ಎನ್‌ಡಿಎ ಸರ್ವಸಮ್ಮತ ಅಭ್ಯರ್ಥಿಯಾಗಿ ಹೊರ ಹೊಮ್ಮುವುದರೊಂದಿಗೆ ದೇಶದ ಮುಂದಿನ ರಾಷ್ಟ್ರಪತಿಯರಾಗುವರೆಂಬ ಊಹಾಪೋಹಕ್ಕೆ ಬಹುಶಃ ಅಂತಿಮ ತೆರೆ ಬಿದ್ದಿದೆ. ಹಿಂದೆಲ್ಲ ರಾಷ್ಟ್ರಪತಿ ಚುನಾವಣೆಗೆ ಅಂತಹ ಕುತೂಹಲವೇನೂ ಇರುತ್ತಿರಲಿಲ್ಲ. ಆದರೆ ಈ ಬಾರಿ ಈ ಸ್ಥಾನಕ್ಕೆ ಅಭ್ಯರ್ಥಿ ಆಯ್ಕೆಗೆ ದೊಡ್ಡ ಕಸರತ್ತು ನಡೆದಿದ್ದು ಬದಲಾದ ರಾಜಕೀಯ ಸನ್ನಿವೇಶಕ್ಕೆ ಸಾಕ್ಷಿ. ರಾಷ್ಟ್ರದ ಪ್ರಥಮ ಪ್ರಜೆಯ ಪಟ್ಟಕ್ಕೆ ಅಬ್ದುಲ್ ಕಲಾಂ ಹೆಸರು ಪ್ರಕಟಿಸುವ ಮೂಲಕ ಪ್ರಧಾನಿ ವಾಜಪೇಯಿ ಅವರು ರಾಜಕೀಯ ಚಾಣಾಕ್ಷತನ ಪ್ರದರ್ಶಿಸಿದ್ದಾರೆ. ಒಂದೇ ಕಲ್ಲಿನಲ್ಲಿ ಇಪ್ಪತ್ತೈದು ಹಕ್ಕಿ ಹೊಡೆದಿದ್ದಾರೆ.

ರಾಷ್ಟ್ರಪತಿ ಸ್ಥಾನದ ಅಭ್ಯರ್ಥಿ ಆಯ್ಕೆ ವಿಚಾರದಲ್ಲಿ ಆಡಳಿತಾ ರೂಢ ಎನ್ ಡಿ. ಎ. ಪ್ರಧಾನಿಗೇ ಅಧಿಕಾರ ನೀಡಿದ್ದು ಹೌದಾದರೂ ವಾಸ್ತವದಲ್ಲಿ ಅವರು ನಿರ್ಧಾರ ಕುರಿತಂತೆ ಪರವಶರಾಗಿದ್ದರು. ಎಲ್. ಕೆ ಅಡ್ವಾಣಿ, ಪ್ರಮೋದ್ ಮಹಾಜನ್ ಹಾಗೂ ಜಾರ್ಜ್ ಫರ್ನಾಡೀಸ್ ಕೂಟವು ಮಹಾರಾಷ್ಟ್ರ ರಾಜ್ಯಪಾಲ ಪಿ. ಸಿ. ಅಲೆಕ್ಸಾಂಡರ್ ಪರ ಪ್ರಬಲ ಲಾಬಿ ನಡೆಸಿ ಪ್ರಧಾನಿಯ ಕೈ ಕಟ್ಟಿ ಕೂರಿಸಿತ್ತು. ಕೃಷ್ಣಕಾಂತ್‌ರನ್ನೇ ಅಭ್ಯರ್ಥಿಯಾಗಿಸಲು ಚಂದ್ರಬಾಬು ನಾಯ್ಡು ಶತಾಯಗತಾಯ ಪ್ರಯತ್ನ ನಡೆಸಿದ್ದನ್ನು ಮನಗಂಡ ವಾಜಪೇಯಿ ಅಬ್ದುಲ್ ಕಲಾಂ ಹೆಸರು ಒಪ್ಪಿಕೊಳ್ಳುವಂತೆ ನಾಯ್ಡು ಮನವೊಲಿಸುವ ಮೂಲಕ ತಮ್ಮ ಪ್ರಾಬಲ್ಯ ತೋರಿದರು. 1969 ರಲ್ಲಿ ಇಂದಿರಾ ಗಾಂಧಿ ಇಚ್ಛೆಗೆ ವಿರುದ್ಧವಾಗಿ ನೀಲಂ ಸಂಜೀವ ರೆಡ್ಡಿಯವರನ್ನು ರಾಷ್ಟ್ರಪತಿ ಸ್ಥಾನಕ್ಕೆ ಕೂರಿಸಿದ ಘಟನೆಯನ್ನು ಇದು ನೆನಪಿಸುತ್ತದೆ.

ಅತ್ತ ಅಬ್ದುಲ್ ಆಯ್ಕೆಯಿಂದ ಪ್ರತಿಪಕ್ಷ ಪಾಳೆಯದಲ್ಲಿ ದಿಗ್ಭ್ರಮೆ ಉಂಟಾಗಿದೆ. ಸೂಕ್ತ ಅಭ್ಯರ್ಥಿಯಾಗಿ ಎನ್‌ಡಿಎ ಇನ್ನಿಲ್ಲದ ಹುಡುಕಾಟ ನಡೆಸಿರುವುದಾಗಿ ನಾರಾಯಣನ್ ಅವರನ್ನೇ ಎರಡನೆ ಅವಧಿಗೆ ಮುಂದುವರಿಸಲು ಹವಣಿಸುತ್ತಿದ್ದ ಪ್ರತಿಪಕ್ಷಗಳಿಗೆ ಕಲಾಂ ಈಗ ಬಿಸಿ ತುಪ್ಪ. ಏನೂ ಮಾಡದ ಸ್ಥಿತಿಯಲ್ಲೀಗ ಪ್ರತಿಪಕ್ಷಗಳಿವೆ.

ಡಾ. ಎಪಿಜೆ ಅಬ್ದುಲ್ ಕಲಾಂ ಅವರ ಉಮೇದುವಾರಿಕೆಯನ್ನೂ ಯಾರು ಪ್ರಶ್ನಿಸುವಂತೆಯೇ ಇಲ್ಲ. ಅತ್ಯಂತ ನಿರ್ವಿವಾದಿತ ವ್ಯಕ್ತಿ. ಅಂತಾರಾಷ್ಟ್ರೀಯ ಖ್ಯಾತಿಯ ವಿಜ್ಞಾನಿ. ಎಲ್ಲಕ್ಕೂ ಮಿಗಿಲಾಗಿ ಅಪ್ಪಟ ದೇಶಪ್ರೇಮಿ. ಇವರ ಆಯ್ಕೆಯಿಂದ ರಾಷ್ಟ್ರಪತಿ ಹುದ್ದೆಯ ಗೌರವ ಇಮ್ಮಡಿಸುತ್ತದೆ. ಜತೆಗೆ ಅಂತರರಾಷ್ಟ್ರೀಯ ಮಟ್ಟದಲ್ಲೂ ಸದ್ಭಾವನೆ ಮೂಡುತ್ತದೆ. ಅಲ್ಲದೆ ರಾಜಕಾರಣಿ ಅಲ್ಲದ ವ್ಯಕ್ತಿಯೊಬ್ಬರು ಪ್ರತಿಷ್ಠಿತ ಪದವಿ ಅಲಂಕರಿಸಿದಂತಾಗುತ್ತದೆ. ಈ ಕಾರಣಗಳಿಂದಾಗಿ ಕಲಾಂ ಅವಿರೋಧ ಆಯ್ಕೆಯಾಗಬೇಕು. ಪ್ರತಿಪಕ್ಷಗಳೂ ಪ್ರತಿಷ್ಠೆ ಬದಿಗಿಟ್ಟು ಇದಕ್ಕೆ ನೆರವಾದರೆ ಹೊಸ ಪರಂಪರೆಗೆ ನಾಂದಿ ಹಾಡಿದಂತಾಗುತ್ತದೆ.

ಗುಜರಾತ್ ವಿದ್ಯಮಾನಗಳಿಂದ ಸರಕಾರದ ವರ್ಚಸ್ಸು ತೀರ ಕುಂದಿತ್ತು. ರಾಷ್ಟ್ರಪತಿ ಸ್ಥಾನಕ್ಕೆ ಕಲಾಂರನ್ನು ಆಯ್ಕೆ ಮಾಡಲು ಮುಂದಾಗುವ ಮೂಲಕ ಅದರ ಪ್ರತಿಷ್ಠೆ ಖಂಡಿತ ಹೆಚ್ಚಲಿದೆ. ಇಷ್ಟಾಗಿಯೂ ಅಭ್ಯರ್ಥಿ ಆಯ್ಕೆ ವಿಷಯದಲ್ಲಿ ಈ ಬಾರಿ ವಿಪರೀತ ಕೆಸರು ಎರಚಾಟ ನಡೆದಿದ್ದು ಒಳ್ಳೆಯ ಲಕ್ಷಣವಲ್ಲ. ಕೆ. ಆರ್. ನಾರಾಯಣನ್ ಅವರಿಗೆ ಎರಡನೆ ಅವಧಿಗೆ ಅವಕಾಶವಿಲ್ಲ ಎಂಬುದನ್ನು ತೀರ ಕಟು ರೀತಿಯಲ್ಲಿ ಜಾಹೀರು ಪಡಿಸುವ ಅಗತ್ಯವಿರಲಿಲ್ಲ. ಅಂತೆಯೇ ಅಭ್ಯರ್ಥಿಗಳ ಹುಡುಕಾಟದಲ್ಲಿ ರಾಜಕೀಯ ಕಸರತ್ತು ಈ ಮಟ್ಟಿಗೆ ನಡೆಯುವ ಅಗತ್ಯವಿರಲಿಲ್ಲ. ಇನ್ನು ಮುಂದಾದರೂ ಇಂಥ ಪ್ರಮುಖ ಹುದ್ದೆಗಳಿಗೆ ಒಮ್ಮತದ ಅಭ್ಯರ್ಥಿ ಆಯ್ಕೆಗೆ ಗಂಭೀರ ಪ್ರಯತ್ನ ನಡೆಯಲಿ ಎಂದು ಸಂಗಾತಿ ಆಶಿಸುತ್ತದೆ

-ಸಂಗಾತಿ.

## ವರದಕ್ಷಿಣೆ

ಮಗಳಿಗೆ ಮದ್ವೆ ಮಾಡಟ, ಅಪ್ಪಂಗೆ ಅಲೆದಾಟ
ಕಂಡ್ ಕೇಳ್ದವ ರೊಟ್ಟಿಗೆಲ್ಲಾ ಹಣಕೋಸ್ಕರ ಬೇಡಾಟ
ಸ್ವಾಭಿಮಾನನ ಬುಟ್ಬ್ ಅಪ್ಪಂದ್ ಆತ್ಮಸಾಕ್ಷಿನೆ ಕೊಟ್ಟಿ
ಅದೆಷ್ಟ್ ಬ್ಯಾಂಕ್ ಬೇಲೆನ್ಸ್‌ನೆಲ್ಲಾ ನಿಲ್ ಮಾಡ್ಬೋ ॥

ಅದೆಷ್ಟ್ ಆಸ್ತಿಗಳ ಆರಕೆ ಮೂರಕೆ ಅಡವಿಟ್ಬೋ
ಕೈಗೆ ಚಾಕೆ ಮುಂದೆ ಪಸಲ್‌ನ ಕೊಯ್ದು ಕೊಟ್ಬೊ
ಅಣ್ಣಯ್ಯನ ಸ್ಟಡೀಸ್ ಹಿಂಗಾಗಿ ಅರ್ಧಕೆ ನಿಂತತ್
ತಲೆ ಕೆರ್ಕಂಡ್ ಒಂದ್ ಕೆಲ್ಸ ಕೊಡೀತ ಕೇಳ್‌ತಿತ್ ॥

ಕೊನೆಗೊಬ್ಬ ಅಧಿಕಾರಿ ಮನೇಲಿ ಅಡಿಯಾಳಾಗಿ ಮಾಡ್‌ತಿತ್
ಎಷ್ಟ್ ಮಂದಿಗೆ ಒಗ್ಗೊ ನಮ್ಮಪ್ಪ ಬರವಸೆಯ ಕಂತೆಗಳ
ಹೊರಲಾರದೆ ತೀರಲಾರದ ಸಾಲದ ಶೂಲವ ಮಾಡ್ದೊ
ಎಂದೆಂದಿಗೂ ಮೇಲೇರದಂಗೆ ಬಿಕಾರಿ ಆಗಿ ಹೋದ್ರೊ ॥

ಅದೆಷ್ಟ್ ರಾತ್ರಿ ನಿದ್ದೆ ಬುಟ್ಟ್ ಹರಿಸಿದೋ ಕಣ್ಣೀರ್
ನಾನೆಷ್ಟ್ ಬಾರಿ ಹಾಕ್ದೊ ಹಿಡಿ ಶಾಪನ ಆ ಗಂಡಿಗೆ
ಎಲ್ಲಾ ಸಂಬಾವ್ಯ ಗಂಡನ ಅಲ್ಪ ಬುದ್ಧಿಯ ಬೇಡಿಕೆ
ಯಾವನೋ ಎನ್ ಬುದ್ಧಿಯವನೋ ಬರೀ ನಂಬಿಕೆ ॥

ಪ್ರೀತಿಯ ಕುಡಿಯ ಕಡಿದು ಕೊಟ್ಬೊ ಈ ಗಂಡಿಗೆ
ಅಪರಿಚಿತ ಈ ಜನರ ಸಂಸಾರದ ಸಹಾನುಭೂತಿ
ಅನುಸರಿಸಲೊಲ್ಲದ ಇವರ ಅನುಕಂಪದ ಪ್ರೀತಿ
ಅನುಭವಿಸಲೇ ಬೇಕಲ್ಲ ಅರಿಯದಿರುವ ಹೆಣ್ಣು ಹೆತ್ತವರು ॥

- ಶಂಕರನ ಬಸಪ್ಪ, ಮೈಸೂರು.

ಆತ್ಮ ಗಂಗೆಯ ಮಿಂದು ಜ್ಯೋತಿ ಲಿಂಗವನರಿಯೆ

# ಅಗಲಿದ ಯೋಧನಿಗೆ ಅಂತಿಮ ನಮನ : ದೋಳ್ಪಾಡಿಯ ಹವಲ್ದಾರ್ ಪರಮೇಶ್ವರ ಗೌಡ



ದೇಶಕ್ಕಾಗಿ ವೈರಿಗಳ ಜೊತೆ ಕಾದಾಡಿ ಪ್ರಾಣಾರ್ಪಣೆ ಗೈದು, ಹುತಾತ್ಮರಾದ ವೀರ ಯೋಧ ದೋಳ್ಪಾಡಿಯ ಹವಲ್ದಾರ್ ಪರಮೇಶ್ವರ ಗೌಡರ ಅಂತ್ಯ ಸಂಸ್ಕಾರ ಸರಕಾರಿ ಗೌರವಗಳೊಂದಿಗೆ ಜೂನ್ 11 ರಲ್ಲಿ ಅವರ ಸ್ವಗ್ರಾಮವಾದ ದೋಳ್ಪಾಡಿಯಲ್ಲಿ ನೆರವೇರಿತು.

ಶೋಕತಪ್ತ ಬಂಧು ಬಳಗ, ದೋಳ್ಪಾಡಿ ಗ್ರಾಮದ ಸಾವಿರಾರು ಜನರು ವೀರ ಯೋಧನಿಗೆ ನಮನ ಸಲ್ಲಿಸಿದರು. ಭಾರತೀಯ ಸೇನಾ ಪಡೆಯ ಎಂಟು ಮಂದಿ ಸೈನಿಕರು ಕುಶಾಲ ತೋಪುಗಳನ್ನು ಹಾರಿಸುವ ಮೂಲಕ ಗೌರವ ಸಲ್ಲಿಸಿ ಪಾರ್ಥಿವ ಶರೀರಕ್ಕೆ ಅಗ್ನಿ ಸ್ಪರ್ಶ ಮಾಡಲಾಯಿತು.

ಈ ಸಂದರ್ಭದಲ್ಲಿ ಶಾಸಕರಾದ ಡಿ. ವಿ. ಸದಾನಂದ ಗೌಡ, ಎಸ್. ಅಂಗಾರ, ಪುತ್ತೂರು ಎಪಿಎಂಸಿ ಅಧ್ಯಕ್ಷ ಸಿ. ಪಿ. ಜಯರಾಮಗೌಡ, ತಹಸೀಲ್ದಾರ್ ರಾಮಕೃಷ್ಣರಾವ್, ಕಡಬ ಠಾಣಾಧಿಕಾರಿ ಲಕ್ಷ್ಮಣ ಗೌಡ ಉಪಸ್ಥಿತರಿದ್ದು ಅಗಲಿದ ಯೋಧನಿಗೆ ಅಂತಿಮ ನಮನ ಸಲ್ಲಿಸಿದರು.

ಇದಕ್ಕೂ ಮುನ್ನ ಜೂನ್ 9 ಭಾನುವಾರ ಮಧ್ಯರಾತ್ರಿ ಜಮ್ಮುನಿವಿಂದ ವಿಶೇಷ ವಿಮಾನದಲ್ಲಿ ಪರಮೇಶ್ವರ ಗೌಡರ ಮೃತ ದೇಹ ಓಕ್ಕೂರು ಸೇನಾ ನೆಲೆಗೆ ತರಲಾಯಿತು. ಅಲ್ಲಿಂದ ವಿಶೇಷ ಅಂಬುಲೆನ್ಸ್‌ನಲ್ಲಿ ಸೇನಾ ಅಧಿಕಾರಿಗಳು ಶವವನ್ನು ಪುತ್ತೂರಿಗೆ ತಂದರು.

ಅಂದು ಮುಂಜಾನೆ ಐದು ಗಂಟೆಗೆ ವೀರ ಯೋಧನ ದೇಹ ರಾಷ್ಟ್ರೀಯ ಹೆದ್ದಾರಿ ಮೂಲಕ ಗುಂಡ್ಯವನ್ನು ಪ್ರವೇಶಿಸುತ್ತಿದ್ದಂತೆ ಸದಾನಂದ ಗೌಡ ಅಂತಿಮ ಯಾತ್ರೆಯನ್ನು ಬರಮಾಡಿಕೊಂಡರು.

ದೋಳ್ಪಾಡಿ ಗ್ರಾಮದ ಜನರು ಯೋಧನ ದರ್ಶನಕ್ಕೆ ಅಹೋರಾತ್ರಿ ಕಾದು ಕುಳಿತಿದ್ದು, ಗೌರವಾದರ, ಶೋಕ ಕಂಬನಿ ಮಿಡಿದರು. ಸೂರ್ಯ ಕೆಂಪೇರಿ ಬಾನು ಏರುತ್ತಿದ್ದಂತೆ ಆಗಲೇ ಸಿದ್ಧಗೊಳಿಸಲಾದ ರುದ್ರ ಭೂಮಿಗೊಯ್ದು ಚಿತೆಗೇರಿಸಲಾಯಿತು.

ತಾಯ್ನಾಡಿಗಾಗಿ ಬಲಿದಾನ ಮಾಡಿದ ಪರಮೇಶ್ವರ ಗೌಡ ಅವರ ದೇಹ ಸಕಲ ಸೇನಾ ಗೌರವದೊಂದಿಗೆ ಪಂಚಭೂತಗಳಲ್ಲಿ ಲೀನವಾಯಿತು.

ದೇಶಕ್ಕಾಗಿ ಬಲಿದಾನಗೈದ ಹವಲ್ದಾರ್ ಪರಮೇಶ್ವರ ಅವರ ಕುರಿತು ದಕ್ಷಿಣ ಕನ್ನಡ ಜಿಲ್ಲಾ ಆಡಳಿತ ಪರಮ ನಿರ್ಲಕ್ಷ್ಯ ತೋರಿದೆ ಎಂದು ಶಾಸಕ ಡಿ. ವಿ. ಸದಾನಂದ ಗೌಡರು ಆರೋಪಿಸಿದ್ದಾರೆ. ಈ ಬಗ್ಗೆ ಕೇಂದ್ರ ರಕ್ಷಣಾ ಸಚಿವಾಲಯ, ಗೃಹ ಖಾತೆ ಹಾಗೂ ರಾಜ್ಯ ಸರಕಾರಕ್ಕೆ ದೂರು ಸಲ್ಲಿಸಿದ್ದಾರೆ.

ಭಾನುವಾರ ರಾತ್ರಿ ಹವಲ್ದಾರ್ ನಿಧನದ ಸುದ್ದಿ ಪುತ್ತೂರಿಗೆ ಬಂದಿತ್ತು. ಸೋಮವಾರ ಅವರ ಕುರಿತು ಜಿಲ್ಲಾಡಳಿತ ಯಾವುದೇ ಮಾಹಿತಿ ಪಡೆಯುವಲ್ಲಿ ವಿಫಲವಾದದನ್ನು ಸ್ಮರಿಸಬಹುದು.

ಮಂಗಳವಾರ ಯೋಧನ ಅಂತಿಮ ಯಾತ್ರೆಯಲ್ಲಿ ಜಿಲ್ಲಾಡಳಿತ ಸಾಂಕೇತಿಕವಾಗಿಯೂ ಭಾಗವಹಿಸಲಿಲ್ಲ ಎಂದು ಟೀಕಿಸಿರುವ ಅವರು, ಸೈನಿಕರ ಕುರಿತು ಜಿಲ್ಲಾಡಳಿತದ ಅವಗಣನೆಗೆ ಅಕ್ಷಮ್ಯವಾಗಿದೆ ಎಂದು ಟೀಕಿಸಿದ್ದಾರೆ.

ಅಂತ್ಯ ಸಂಸ್ಕಾರದಲ್ಲಿ ಜಿಲ್ಲಾಧಿಕಾರಿ, ಜಿಲ್ಲಾ ಪೊಲೀಸ್ ಅಧಿಕಾರಿ ಸಹಿತ ಯಾವುದೇ ವರಿಷ್ಠ ಅಧಿಕಾರಿಗಳು ಭಾಗವಹಿಸದೆ ಇರುವುದು ವಿಷಾದನೀಯ ಎಂದು ಹೇಳಿರುವ ಅವರು, ಈ ಕುರಿತು ಸಾರ್ವಜನಿಕರಲ್ಲಿ ಅಧಿಕಾರಿಗಳು ಬಹಿರಂಗ ಕ್ಷಮೆ ಯಾಚಿಸಬೇಕು ಎಂದು ಆಗ್ರಹಿಸಿದ್ದಾರೆ.

### ಸೇನಾಧಿಕಾರಿ ಸ್ಪಷ್ಟನೆ :

ಹವಲ್ದಾರ್ ಪರಮೇಶ್ವರ ಗೌಡ ಅವರ ಸಾವಿನ ಕುರಿತಂತೆ ಎದ್ದಿದ್ದ ಅಸಂಬದ್ಧ ವರದಿ, ಗುಮಾನಿಗಳಿಗೆ ಕೊನೆಗೂ ತೆರೆ ಬಿದ್ದಿದೆ. ಅವರು ಪಾಕ್ ಷೆಲ್ ದಾಳಿಗೆ ಮೃತ ಪಟ್ಟಿದ್ದಾರೆ ಎಂದು ಸೇನಾ ಅಧಿಕಾರಿಗಳು ಖಚಿತಪಡಿಸಿದ್ದಾರೆ.

ಭಾರತೀಯ ಸೇನಾ ಪಡೆಯ ಎಂ. ಇ. ಜಿ. ಗ್ರೂಪ್ 430 ಫೀಲ್ಡ್ ಕಂಪನಿಯ 203 ನೇ ಎಂಜಿನಿಯರಿಂಗ್ ರೆಜಿಮೆಂಟ್ಸ್ ಸುಬೇದಾರ್ ಪಾಂಡುರಂಗ ಜೂನ್ 11 ರ ಮಂಗಳವಾರ ಪುತ್ತೂರಿನಲ್ಲಿ ಸುದ್ದಿಗಾರರೊಂದಿಗೆ ಮಾತನಾಡಿ, ಪರಮೇಶ್ವರ ಗೌಡ ಅವರು ದೇಶಕ್ಕಾಗಿ ಬಲಿದಾನಗೈದರೆ ಹೊರತು ಕಾಯಿಲೆಯಿಂದ ಮೃತಪಟ್ಟಿಲ್ಲ ಎಂದು ಖಚಿತ ಪಡಿಸಿದರು.

-ಸಂಗಾತಿ

# ತಲಕಾಡು ಗಂಗರು
# ತಲಕಾಡಿನ ಗಂಗರೆ ವೆಳ್ಳಾಳು ಬೆಳ್ಳಾಳರು.

ತಲಕಾಡಿನ ಗಂಗರು ರಾಜವಂಶಸ್ಥರು ಇವರನ್ನು ಶಾಸನಾಧರಗಳಿಂದ ಗಂಗರಸರೆಂದು ಕರೆಯಲ್ಪಟ್ಟಿದೆ. ತಲಕಾಡು ಗಂಗರು ಇಕ್ಷ್ವಾಕು ವಂಶಕ್ಕೆ ಸೇರಿದವರೆಂದೂ ಚರಿತ್ರೆಗಳಲ್ಲಿ ಇತಿಹಾಸಕಾರರುಗಳು ವಿವರಿಸಿರುತ್ತಾರೆ. ಅಲ್ಲದೆ ತಲಕಾಡು ಗಂಗರನ್ನು ದಡಿಗ-ಮಾದವರು-ಕೊಂಗಣಿ ವರ್ಮನೆಂಬ ಬಿರುದನ್ನು ಧರಿಸಿ ರಾಜ್ಯಬಾರ ಮಾಡಿರುತ್ತಾರೆ. ಇವರು ಉತ್ತರದ ಕಡೆಯಿಂದ ಬಂದವರು ಕೊಯಮುತ್ತೂರು ಜಿಲ್ಲೆಯ ಗಂಗ ಪೆರೂರು ನಿಂದ ಬಧು ರಾಜ್ಯಸ್ಥಾಪನೆ ಮಾಡಿದರು. ಇಕ್ಷ್ವಾಕು ವಂಶದ ದಡಿಗ-ಮಾದವರು, ಕೊಯಮುತ್ತೂರು ಸೇಲಂ, ಧರ್ಮಪೂರಿ, ಕೇರಳದ ಸ್ವಲ್ಪ ಭಾಗಗಳನ್ನು ಗೆದ್ದು ತಮ್ಮ ಆಡಳಿತಕ್ಕೆ ಒಳಪಡಿಸಿಕೊಂಡಿದ್ದರಿಂದ ಇವರಿಗೆ "ಕೊಂಗಣಿವರ್ಮನೆಂದು ಬಿರುದು ಬಂದಿದ್ದು ಆ ಬಿರುದನ್ನೆ ತಮ್ಮ ಹೆಸರುಗಳ ಮುಂದೆ ಹಾಕಿಕೊಳ್ಳಲು ಪ್ರಾರಂಭಿಸಿರುತ್ತಾರೆಂದು ಇತಿಹಾಸಕಾರರು ಬರೆದಿರುತ್ತಾರೆ. ಮತ್ತು ಇವರು (ಗಂಗರು) ರಾಜ್ಯ ಸ್ಥಾಪನೆ ಮಾಡಿ ಆಡಳಿತ ನಡೆಸಲು ತಲಕಾಡನ್ನು ಕೇಂದ್ರಸ್ಥಾನವನ್ನಾಗಿ ಮಾಡಿ ನಂತರ ತಲಕಾಡನ್ನೆ ಗಂಗವಾಡಿಯೆಂದು ಕರೆದುಕೊಂಡರು. ಅದಕ್ಕೆ ಗಂಗವಾಡಿ 96,000 ಎಂದು ಕರೆದರು. ತಲಕಾಡು ಕಾವೇರಿ ನದಿ ದಂಡೆ ಮೇಲೆ ಇದ್ದುದ್ದರಿಂದ ಗಂಗೆ ಪವಿತ್ರವಾದದ್ದು ಅದಕ್ಕೆ ಗಂಗವಾಡಿ ಎಂದು ಕರೆದರು. ಇವರುಗಳು ಬಿರುದುಗಳನ್ನು ಧರಿಸಿದ್ದಕ್ಕೆ ಹೆಸರುಗಳನ್ನು ಬದಲಾಯಿಸಿದ್ದಕ್ಕೆ ಇತಿಹಾಸಕಾರರುಗಳು ಶಾಸನಾಧರಗಳಿಂದ ಸ್ಪಷ್ಟಪಡಿಸಿರುತ್ತಾರೆ.

ಇತಿಹಾಸಕಾರರುಗಳು ತಲಕಾಡು ಗಂಗರ (ದಡಿಗರ) ಬಗ್ಗೆ ಅಧ್ಯಯನ ಮಾಡಿ ವಿದ್ವಾಂಸರುಗಳು ಚರ್ಚೆ ಮಾಡಿ ದಡಿಗ ಮಾದವರೆ ಕೊಂಗಣೀವರ್ಮನೆಂದು ಇಕ್ಷ್ವಾಕು ವಂಶಕ್ಕೆ ಸೇರಿದವೆಂತಲೂ ವೆಳ್ಳಾಳ/ಬೆಳ್ಳಾಳ ಒಕ್ಕಲಿಗ ಪಂಗಡಕ್ಕೆ ಸೇರಿದವರೆಂತಲೂ ಬರೆದಿರುತ್ತಾರೆ. ತಲಕಾಡಿನ ಗಂಗರು ಬಹಳ ದೀರ್ಘ ಕಾಲ ರಾಜ್ಯಭಾರ ಮಾಡಿದರು. ಉತ್ತಮ ಆಡಳಿತ ಮಾಡಿ ಇತಿಹಾಸದ ಪುಟಗಳಲ್ಲಿ ಸ್ಥಿರಾಯುವಾಗಿ ಉಳಿದಿದ್ದಾರೆ.

ತಲಕಾಡಿನ ಗಂಗರ ಆಡಳಿತ ಕಾಲದಲ್ಲಿ ಹೊರದೇಶಗಳಿಂದ ಬಂದಂತ ಆಡಳಿತಗಾರರು ವಿದ್ವಾಂಸರುಗಳು ಅವರುಗಳ ಅನುಭವಗಳನ್ನು ಬರೆದಿಟ್ಟು ಹೋಗಿದ್ದಾರೆ. ಅವುಗಳ ಆಧಾರದಂತೆ ಗಂಗರ ಕಾಲವನ್ನು ಸುಭಿಕ್ಷವಾದ ಕಾಲ ಸುವರ್ಣಯುಗಕ್ಕೆ ಹೋಲಿಸಿರುತ್ತಾರೆ.

ಗಂಗರು ತಮ್ಮ ಆಡಳಿತ ಕಾಲದಲ್ಲಿ ರೋಮ್ ಇಟಲಿ, ಮತ್ತು ಗ್ರೀಕ್ ಮುಂತಾದ ದೇಶಗಳೊಡನೆ ವಾಣಿಜ್ಯ ವ್ಯಾಪಾರ ಸಂಬಂಧ ಇಟ್ಟುಕೊಂಡಿದ್ದರು. ಇತ್ತೀಚೆಗೆ ಪುರಾತತ್ವ ಇಲಾಖೆ ತಲಕಾಡನ್ನು ಸಂಶೋಧನೆ ನಡೆಸಿ ಹೊಸ ಹೊಸ ವಿಚಾರಗಳನ್ನು ಹೊರ ತಂದಿದ್ದಾರೆ. ಮತ್ತು ಸಂಶೋಧನೆಯು ಮುಂದುವರಿದಿದೆ. ಇನ್ನೂ ಹೆಚ್ಚಿನ ವಿಚಾರಗಳು ಬೆಳಕಿಗೆ ಬರಬೇಕಷ್ಟೆ.

ಈಗಾಗಲೇ ಪ್ರಾಚೀನ ಶಾಸನಗಳು, ಗ್ರಂಥಗಳನ್ನು ಆಧರಿಸಿ ನೋಡಿದಾಗ ಹಿಂದೆಯೇ ತಲಕಾಡು ಗಂಗರು, - ದಡಿಗ - ಮಾದವರು ನಾಗರೀಕತೆಯಲ್ಲಿ ಮುಂದುವರಿದಿದ್ದರೆಂದೂ ಹೊರದೇಶಗಳೊಂದಿಗೆ ವ್ಯವಹಾರ ಸುತ್ತಿದವರೆಂದು ತಿಳಿಯುತ್ತದೆ. ಮತ್ತು ಅವರ ಕಾಲದ ಶಾಸನ, ನಾಣ್ಯ, ಕೆಲವು ಅವಶೇಷಗಳಿಂದಲೂ ಗೊತ್ತುಪಡಿಸಬಹುದು. ಮತ್ತು ಇತರ ರಾಜ ಮನೆತನಗಳಿಗಿಂತ ದೀರ್ಘ ಕಾಲ ರಾಜ್ಯಭಾರ ಮಾಡಿದ ರಾಜ ಮನೆತನವೆಂಬ ಕೀರ್ತಿಗೆ ಬಾಜನರಾಗಿದ್ದಾರೆ. ಹೀಗಿದ್ದರೂ ಸಹ ಈ ವಂಶದ (ಜನಾಂಗದ ) ದಡಿಗ- ಮಾದವರ-ಬೆಳ್ಳಾಳು ವೆಳ್ಳಾಳು ಒಕ್ಕಲಿಗರ ಬಗ್ಗೆ ಅವರ ಅಭಿವೃದ್ಧಿಯ ಬಗ್ಗೆ ಅವರ ಸಂಪ್ರದಾಯದ ಬಗ್ಗೆ ಸರಕಾರ ಗಮನ ಹರಿಸಿಲ್ಲ ಮತ್ತು ಸರಕಾರ ಹೊರಡಿಸಿರುವ ಜನಾಂಗದ ವರ್ಗೀಕರಣದ ಪಟ್ಟಿಯಲ್ಲಿ ತಲಕಾಡು (ಗಂಗರು) ಮೂಲದವರಾದ (ದಡಿಗ- ಮಾದವರ)ಬೆಳ್ಳಾಳು/ ವೆಳ್ಳಾಳು ಒಕ್ಕಲಿಗರ ಹೆಸರನ್ನು ಸೇರಿಸಿಲ್ಲ. ಇತಿಹಾಸಕಾರರಾದ ಡಾ|| ಈಡ್ಗರ್ ಥರ್‌ಸ್ಟನ್ ರವರು ತಮ್ಮ ಕ್ಯಾಸ್ಟ್ ಆ್ಯಂಡ್ ಟ್ರೈಬ್ಸ್ ಆಫ್ ಸೌತ್ ಇಂಡಿಯಾ ಎಂಬ ಗ್ರಂಥ ಭಾಗ ನಂ-7 ಪುಟದಲ್ಲಿ ವಿವರಿಸಿ ಸ್ಪಷ್ಟ ಪಡಿಸಿದ್ದಾರೆ ಮತ್ತು ಕರ್ನಾಟಕ ಇತಿಹಾಸ ಪರಂಪರೆ ಒಕ್ಕಲಿಗರ ಇತಿಹಾಸ ದರ್ಶನ, ಕಲಿವೀರ ಗಂಗರ ಸಾಂಸ್ಕೃತಿಕ ಪರಂಪರೆ ಎಂಬ ಗ್ರಂಥಗಳಲ್ಲಿಯೂ ಬರೆದಿರುತ್ತಾರೆ.

ಆದರೂ ಸಹ ಮೂಲ ಪುರುಷರ ವರ್ಗದವರನ್ನೆ ಸರಕಾರ ಕೈ ಬಿಟ್ಟಿರುತ್ತಾರೆ. ಈಗಲಾದರೂ ಸಹ ಸರಕಾರದವರು ಸರಿಯಾಗಿ ವಿಚಾರವನ್ನು ವಿಮರ್ಶಿಸಿ ಸರಕಾರ ಹೊರಡಿಸಿರುವ ಜಾತಿಯ ವರ್ಗೀಕರಣದ ಪಟ್ಟಿಗೆ ತಲಕಾಡು ಗಂಗರ ಮೂಲ ಪುರುಷರಾದ (ದಡಿಗ-ಮಾಧವರ) ಬೆಳ್ಳಾಳು/ವೆಳ್ಳಾಳು ಒಕ್ಕಲಿಗರ ಹೆಸರನ್ನು ಸೇರಿಸುವುದು ಸಮಂಜಸವಾಗಿದೆ.

-ಬರಹ ಟಿ. ಎನ್. ಮುದ್ದೇಗೌಡ
ತಲಕಾಡು ಗಂಗರ ವೆಳ್ಳಾಲ /ಬೆಳ್ಳಾಲ ಟ್ರಸ್ಟ್
ಯಾದವಗಿರಿ ಮೈಸೂರು.

# ನಿಸರ್ಗ ಮಡಿಲ ಷಷ್ಟ್ಯಬ್ಧ ತಾರೆ - ಶ್ರೀ ಸಂಪಾಜೆ ದೇವಿ ಪ್ರಸಾದ್



ಕಲ್ಲರಳಿ ಹೂವಾಗಿ, ಎಲ್ಲರಿಗೆ ಬೇಕಾಗಿ
ಎಲ್ಲರೊಳಗೊಂದಾಗು ಮಂಕುತಿಮ್ಮ॥

ಡಿ. ವಿ. ಜಿ. ಯ ಆಶಯಗಳು ಮಣ್ಣು ಮುಕ್ಕುತ್ತಿರುವ ಈ ಸಂಧಿಕಾಲದಲ್ಲಿ ಅಲ್ಲೋ ಇಲ್ಲೋ ಒಂದಿಬ್ಬರು ಸಾಮರಸ್ಯದ ವಾಸ್ತವಿಕ ಪ್ರತಿಪಾದನೆಯ ಮೂಲಕ ಬದುಕಿನ ನಿಜವಾದ ಅರ್ಥವನ್ನು ಗುರುತಿಸಿದವರು ಇರುವುದು ನಾಡಿನ ಸುದೈವ. ಸಾರ್ಥಕ ಬದುಕಿನ ಸವಾಲುಗಳು ಹಲವಾರು ಹಿಂದಿನ ಘಟನಾವಳಿಗಳು, ವರ್ತಮಾನದ ಪ್ರತಿರೋಧಗಳು ಹಾಗೂ ಭವಿಷ್ಯದ ವೈರುಧ್ಯಗಳನ್ನೆಲ್ಲ ಚಿಂತನೆಯ ಮೂಸೆಗೆ ಹಚ್ಚಿ ವಾಸ್ತವ ಅರಿವಿನ ಹೆಜ್ಜೆ ಇಟ್ಟರೆ ಮಾತ್ರ ಸಮಾಜಕ್ಕೆ ನಿಜವಾದ ಅರ್ಥದಲ್ಲಿ ಸೇವೆಗೈದಂತಾಗುವುದು. ಅಂತಹ ವಾಸ್ತವಿಕ ಪ್ರಜ್ಞೆಯ ಕೆಲವೇ ಕೆಲವರಲ್ಲಿ ಅರುವತ್ತು ಸಂವತ್ಸರಗಳ ಫಲಪ್ರದ ಜೀವನ ಸಾಗಿಸಿದ ಸಂಪಾಜೆಯ ನಂಜಯ್ಯನ ಮನೆ ದೇವಿಪ್ರಸಾದ್‌ರವರು ಒಬ್ಬರು.

ದೇವಿ ಪ್ರಸಾದರವರು 'ಹುಟ್ಟಿದ್ದು 1942ರ ಏಪ್ರಿಲ್ 27ರಂದು ಸಂಪಾಜೆಯ ಸಣಯ್ಯ ಪಟೇಲ್ ಮತ್ತು ಪೂವಮ್ಮನವರ ಸುಪುತ್ರನಾಗಿ. ಎಳವೆಯಲ್ಲೇ ತಂದೆಯ ಪಟೇಲ್‌ಗಿರಿಯ ಆಡಳಿತ ವೈಖರಿ, ಭೂ ಮಾಲಿಕತ್ವದ ಭದ್ರತೆಯ ಅಡಿಪಾಯ ಇದ್ದರೂ, ದೇವಿಪ್ರಸಾದರ ಒಲವು ಹರಿದದ್ದು ಸಾಮಾಜಿಕ, ಸಾಂಸ್ಕೃತಿಕ, ಸಾಹಿತ್ಯದ ಮಜಲಿನೆಡೆಗೆ. ಅಂದು ಮೊಳಕೆಯೊಡೆದು ಸಾಹಿತ್ಯಾಸಕ್ತಿಯ ಕುಡಿ ಸಾಂಸ್ಕೃತಿಕ ಬದುಕಿನ ಒಳ ಹರಿವು ಅರುವತ್ತರ ಅಂಚಿನವರೆಗೂ ಹೆಮ್ಮರವಾಗಿ ಸಾಗಿ ಬಂದದ್ದು ಅವರ ಆದಮ್ಯ ನಿಷ್ಠೆ ಮತ್ತು ಪರಿಶ್ರಮದ ಫಲ. ಹಿಡಿದ ಕೆಲಸಗಳನ್ನೂ ಹೇಗಾದರೂ ಸಾಧಿಸಬೇಕೆಂಬ ಹಠದ ದೇವಿ ಪ್ರಸಾದರು ಕೈಯಾಡಿಸಿದ ಕ್ಷೇತ್ರಗಳು ಹಲವು. ಸಹಕಾರ, ರಾಜಕೀಯ, ಸಾಮಾಜಿಕ ರಂಗಗಳ ಒಳನುಗ್ಗಿ ಹೊರಬಂದ ಸಂಪಾಜೆಯವರು ಸಾಹಿತ್ಯ ಕ್ಷೇತ್ರವನ್ನು ಮೆಚ್ಚಿ ಆಯ್ಕೆಮಾಡಿಕೊಂಡವರು.

**ಚರಿತ್ರೆಯ ಪುನರವಲೋಕನ :**

ಚರಿತ್ರೆಯನ್ನು ಗೌರವಿಸಿದವರು ಮಾತ್ರ ಚರಿತ್ರೆಯನ್ನು ನಿರ್ಮಿಸಬಲ್ಲರು ಮತ್ತು ಮುಂದಿನ ಪೀಳಿಗೆಗೆ ತಿಳಿಸಬಲ್ಲರು. ಈ ಮಾತಿನ ಪ್ರತಿಪಾದಕರಾದ ದೇವಿ ಪ್ರಸಾದರು ತನ್ನ ಬಾಲ್ಯದಲ್ಲೇ ರಾಜೇಂದ್ರ ನಾಮೆಯನ್ನು ಓದಿ, ಮಹಾರಾಜ ಕಾಲೇಜಿನ ವಾರ್ಷಿಕ ಸಂಚಿಕೆಗೆ ಬರೆದು ಕೊಟ್ಟ "ದೊಡ್ಡ ವೀರ ರಾಜನ ಕೊನೆಯ ದಿನಗಳು" ಎಂಬ ಚಾರಿತ್ರಿಕ ಕಥೆಗೆ ಸಿಕ್ಕಿದ ಮೆಚ್ಚುಗೆ ತನ್ನ ಮುಂದಿನ ಬದುಕಿನ ಸಾಂಸ್ಕೃತಿಕ ಹಾದಿಗೆ ಪ್ರೇರಣೆಯಾದೀತೆಂದು ಆಗ ಅವರಿಗೆ ಅನಿಸಿರಲಿಲ್ಲ. ಅಂದು ಮೊಳಕೆಯೊಡೆದ ಚರಿತ್ರಾ ದಾಹ ಇಂದಿನವರೆಗೂ ಬತ್ತಲಿಲ್ಲ. ಚರಿತ್ರೆ ವಸ್ತುನಿಷ್ಠವಾಗಿ ಬಿಂಬಿತವಾಗಬೇಕೆಂಬ ತುಡಿತವೇ ಅವರನ್ನು ಸಂಶೋಧನೆಗೆ ಇಳಿಯಲು ಪ್ರೇರೇಪಿಸಿತು. ತಾನು ಹುಟ್ಟಿ, ಆಡಿ, ಬೆಳೆದ ಕೊಡಗು ಮತ್ತು ದಕ್ಷಿಣ ಕನ್ನಡ ಬ್ರಿಟಿಷರ ದೃಷ್ಟಿಯಲ್ಲಿದ್ದ ಅನೇಕ ಸಂಗತಿಗಳನ್ನು ಪುನರವ ಲೋಕನ ಮಾಡಿ ಜನರ ಮುಂದಿಡುವ ಬಗ್ಗೆ ಯೋಚಿಸತೊಡಗಿದರು.

**ಯೋಚನೆ ಯೋಜನೆಯಾದಾಗ............**

1857 ರ ಸಿಪಾಯಿದಂಗೆಯು ಭಾರತದ ಪ್ರಥಮ ಸ್ವಾತಂತ್ರ್ಯ ಸಂಗ್ರಾಮವೆಂದು ಚರಿತ್ರೆಯಲ್ಲಿ ದಾಖಲಾಗಿದೆ. ಆದರೆ ಅದಕ್ಕಿಂತಲೂ ಇಪ್ಪತ್ತು ವರ್ಷಗಳ ಮೊದಲೆ 1837 ರಲ್ಲೇ ಬ್ರಿಟಿಷರ ವಿರುದ್ಧ ಹೋರಾಟದ ಕಹಳೆ ಮೊಳಗಿತ್ತು ಎಂಬ ಸತ್ಯಾಂಶ ಎಲ್ಲೂ ದಾಖಲಾಗಲಿಲ್ಲ. ನಾವು ಅಂದೂ, ಇಂದೂ ನಮ್ಮ ಜೀವಿತದುದ್ದರೂ ಬ್ರಿಟಿಷರು ನೀಡಿದ ಬಳುವಳಿಯನ್ನೆ ಆಧರಿಸಿಕೊಂಡು ಬದುಕುತ್ತಿದ್ದೇವೆ. ಬ್ರಿಟಿಷರು ಅವರ ಮೂಗಿನ ನೇರಕ್ಕೆ ಹೇಳಿದ್ದನ್ನೆ ಸತ್ಯವೆಂದು ನಂಬಿಕೊಂಡು ಬಂದವರು. ಇದರ ನೇರ ಅರ್ಥ ಮಾತ್ರ ನಮ್ಮ ಮೆದುಳಿಗೆ ನಿಲುಕುತ್ತದೆಯೇ ಹೊರತು ಒಳಾರ್ಥದ ಗ್ರಹಿಕೆಗೆ ಪ್ರಯತ್ನಿಸಿದವರಲ್ಲ. ಸಂಪಾಜೆ ದೇವಿಪ್ರಸಾದರು ಈ ಅರುವತ್ತರ ಅಂಚಿನಲ್ಲಿ ಮಾಡಿದ ಮಹೋನ್ನತ ಸಾಧನೆಯೆಂದರೆ ಮದರಾಸು ಪತ್ರಾಗಾರದಲ್ಲಿ ಬ್ರಿಟಿಷರು ಬರೆದಿಟ್ಟಿದ್ದ ದಾಖಲೆಗಳ ಶೋಧನೆ ನಡೆಸಿ ಅದರ ನಿಜಾರ್ಥವನ್ನು ಜನರಿಗೆ ತಿಳಿಸ ಹೊರಟಿರುವುದು. ಅದಕ್ಕಾಗಿಯೇ ಕೊಡಗು ಮತ್ತು ದಕ್ಷಿಣ ಕನ್ನಡ ಜಿಲ್ಲೆಗಳ ಸಮಾನಾಸಕ್ತ ಮಿತ್ರರನ್ನು ಸೇರಿಸಿಕೊಂಡು "ಅಮರ ಕ್ರಾಂತಿ ಉತ್ಸವ ಸಮಿತಿ" ರಚಿಸಿ ತನ್ಮೂಲಕ 1837 ರ ನೈಜ ಘಟನೆಗಳನ್ನು ಸಾಮಾನ್ಯರಿಗೂ ತಿಳಿಸುವ ಮತ್ತು ಅಂದಿನ ಹೋರಾಟದಲ್ಲಿ ಹುತಾತ್ಮರಾದ ಹಿರಿಯರ ಸಂಸ್ಮರಣಾ ಕಾರ್ಯಕ್ರಮಗಳನ್ನು ಹಲವು ಸ್ತರಗಳಲ್ಲಿ ಆಯೋಜಿಸಿರುತ್ತಾರೆ.

ಈ ದೇವಿ ಪ್ರಸಾದರಿಗೆ ಮತ್ತು ಅವರ ಜೊತೆಗಾರರಿಗೆ ಕೆಲಸವಿಲ್ಲ ಎಂದೆಲ್ಲ ಆಡುವವರ ನುಡಿಗಳು ದೇವಿ ಪ್ರಸಾದರನ್ನು ಸೋಂಕುವುದೇ ಇಲ್ಲ. ಅವಾಸ್ತವ ಬೊಗಳೆಗಳನ್ನೆ ಬಂಡವಾಳವಾಗಿ

ದಿನ ಕಳೆಯುವವರಿಂದ ಏನೂ ಸಾಧಿಸಲಾಗದು ಎಂಬ ಅಪ್ಪಟ ನಿಲುವು ಅವರದು. ನಮ್ಮ ಹಿರಿಯರ ಜೀವನ ಶೈಲಿ, ಅವರ ದಿಟ್ಟ ನಿಲುವು, ಧಾರ್ಮಿಕ, ಸಾಂಸ್ಕೃತಿಕ ಪ್ರಜ್ಞೆ ಮುಂದಿನವರು ತಿಳಿದರೆ ಮಾತ್ರ ಜೀವನಕ್ಕೆ ಆಧಾರವೂ ಅರ್ಥವೂ ಬರುತ್ತದೆ. ಮನೆ ಮಂದಿಯೆಲ್ಲ ಸೇರಿ ಹಿರಿಯರಿಗೆ ಸಲ್ಲಿಸುವ ಪಿತೃತರ್ಪಣದಿಂದ ಕೃತಾರ್ಥಭಾವ ಹೊಂದುವಂತೆ ನಾಡಿಗಾಗಿ, ನಾಡಿನ ಸಾಂಸ್ಕೃತಿಕ, ಸಾಹಿತ್ಯಿಕ ಪರಂಪರೆಯಾಗಿ, ಸಾಮಾಜಿಕ ನೆಮ್ಮದಿಗಾಗಿ ಹೋರಾಟ ಮಾಡಿದ ಪುಣ್ಯಕತೆಯನ್ನು ಕಿರಿಯರಿಗೆ ತಿಳಿಸದಿದ್ದರೆ ಹೇಗೆ? ಬ್ರಿಟಿಷರು ಅವರನ್ನು ವಿರೋಧಿಸಿದವರನ್ನು ಉಳಿಯಗೊಡಲಿಲ್ಲ. ಇಲ್ಲಿ ವಿರೋಧ ಭಾರತದ ಯಾವುದೇ ಮೂಲೆಯಲ್ಲಿ, ಯಾವುದೇ ಮಟ್ಟದಲ್ಲಿ ನಡೆದಿದ್ದರೂ ಅದು ಬ್ರಿಟಿಷ್ ವಿರುದ್ಧವೇ ನಡೆದ ಹೋರಾಟ. ಅಂತಹ ಹೋರಾಟಗಾರರನ್ನು ನಾವು ಮರೆತು ಮೆರೆದರೆ ಹೇಗೆ? ಎಂದು ಎನ್. ಎಸ್. ದೇವಿಪ್ರಸಾದ್ ಪ್ರಶ್ನಿಸುತ್ತಾರೆ.

ದೇವಿಪ್ರಸಾದರ ಮಹತ್ವಾಕಾಂಕ್ಷೆಯ ಚಿಂತನೆಗೆ ಚಾಲನೆ ಸಿಕ್ಕಿದ್ದು 1998 ರ ಸ್ವರ್ಣ ಸ್ವಾತಂತ್ರ್ಯೋತ್ಸವದ ವರ್ಷ. ಅಮರ ಕ್ರಾಂತಿ ಉತ್ಸವ ಸಮಿತಿಯ ಅಧ್ಯಕ್ಷರಾಗಿ ಕೊಡಗು - ಕೆನರಾ - ಬಂಡಾಯ, ಕಲ್ಯಾಣಪ್ಪನ ಕಾಟಕಾಯಿ ಎಂದೆಲ್ಲ ಬ್ರಿಟಿಷರಿಂದಲೂ, ಬ್ರಿಟಿಷರ ಹಿಂಬಾಲಕರಿಂದಲೂ ಕರೆಯಲ್ಪಡುತ್ತಿದ್ದ ಭಾರತ ಕಂಡ ಪ್ರಪ್ರಥಮ ಸ್ವಾತಂತ್ರ್ಯದ ಕಿಡಿಯ ಬಗ್ಗೆ ಮುತ್ತಿರುವ ಕಪ್ಪು ಹೊಗೆಯನ್ನು ದೂರೀಕರಿಸುವ ಸಂಭ್ರಮದಲ್ಲಿ ದೇವಿ ಪ್ರಸಾದರು ಸಂಪೂರ್ಣ ತೊಡಗಿಸಿಕೊಂಡರು.

ಸುಳ್ಯದಿಂದ ಮಂಗಳೂರಿನ ಬಾವುಟಗುಡ್ಡೆಯವರೆಗೆ ಅಮರಕ್ರಾಂತಿ ಕಾಲ್ನಡಿಗೆ ಜಾಥಾದ ಮೂಲಕ ಕ್ರಾಂತಿವೀರರ ಕಥಾನಕದ ಬೀದಿನಾಟಕ, ಲಾವಣಿ, ಕುಣಿತ, ಅಲ್ಲಲ್ಲಿ ಸಭೆ ಸಮಾರಂಭ, ಉಪನ್ಯಾಸ ಮೂಲಕ ಬೆಳ್ಳಾರೆ, ಕುಂಬ್ರ, ಪುತ್ತೂರು, ಮಾಣಿ, ನಂದಾವರ, ಫರಂಗಿಪೇಟೆಗಾಗಿ ಮಂಗಳೂರು ತಲುಪಿದಾಗ ಕೃತಾರ್ಥತೆ ಹಸನ್ಮುಖ ಕಾಣುವಂತಾಯಿತು.

1837 ರ ಮಾರ್ಚ್ 30 ರಿಂದ ಏಪ್ರಿಲ್ 5 ರ ಅವಧಿಯಲ್ಲಿ ಬ್ರಿಟಿಷರು ನೆಲೆಸಿದ್ದ ಸ್ಥಳಗಳನ್ನು ಧ್ವಂಸ ಮಾಡುತ್ತಾ ಅವರ ಖಜಾನೆಯನ್ನು ವಶಪಡಿಸಿಕೊಳ್ಳುತ್ತಾ ಬಾವುಟ ಗುಡ್ಡೆಯಲ್ಲಿ ಹಾರಾಡುತ್ತಿದ್ದ ಬ್ರಿಟಿಷ್ ಧ್ವಜವನ್ನು ಕಿತ್ತೆಸೆದು, ಅಲ್ಲಿ ಅಂದಿನ ಭಾರತ ಲಾಂಛನವನ್ನು ಹಾರಿಸಿದಾಗ ಬ್ರಿಟಿಷರು ಬಂಡಾಯ, ಕಾಟಕಾಯಿ ಎಂದು ಕರೆಯದೆ ಸುಮ್ಮನಿರಲಾದೀತೆ? ದೇವಿಪ್ರಸಾದರು ಈ ಅಸತ್ಯದ ಬಗ್ಗೆ ಪ್ರತಿಯೊಬ್ಬರಲ್ಲೂ ಪ್ರಶ್ನಿಸಿ, ವಾಸ್ತವದ ಅರಿವು ಮೂಡಿಸುವ ಪ್ರಯತ್ನಕ್ಕೆ ಪಣತೊಟ್ಟ ಓರ್ವ ವಾಸ್ತವಿಕ ಪ್ರಜ್ಞಾವಂತ.

ಅನಂತರದ ಪ್ರತಿ ವರ್ಷಗಳಲ್ಲೂ ತನ್ನ ಗೆಳೆಯರನ್ನು ಕೂಡಿಕೊಂಡು ಅಮರ ಕ್ರಾಂತಿ ಉತ್ಸವ ಬೇರೆ ಬೇರೆ ವಿಧದಲ್ಲಿ ನಡೆಯುತ್ತಲೆ ಬಂದಿರುತ್ತದೆ. 1999ರಲ್ಲಿ ತಾನು ಮದರಾಸು ಪತ್ರಾಗಾರದಿಂದ ಸಂಗ್ರಹಿಸಿದ ಬ್ರಿಟಿಷರ ದಾಖಲೆಗಳನ್ನು ಕನ್ನಡಕ್ಕೆ ಅನುವಾದಿಸಿ "ಅಮರ ಸುಳ್ಯದ ಸ್ವಾತಂತ್ರ್ಯ ಸಂಗ್ರಾಮ" ಎಂಬ ಶಿರೋನಾಮೆಯಡಿ ಪ್ರಕಟಿಸುವ ಮೂಲಕ ನಾಡಿಗೆ ಒಂದು ಮಹತ್ವದ ಸಂಶೋಧಿತ ಮಾಹಿತಿಯನ್ನು ನೀಡಿದ ಕೀರ್ತಿಗೆ ಪಾತ್ರರಾಗಿದ್ದಾರೆ. ಈ ಪ್ರಕಟಣೆಯನ್ನು ಜವಾಬ್ದಾರಿಕೆ ವಹಿಸಿದ ಪುತ್ತೂರಿನ ಕರ್ನಾಟಕ ಸಂಘವನ್ನು ಅತ್ಯಂತ ವಿನೀತಭಾವದಿಂದ ದೇವಿ ಪ್ರಸಾದರು ಸ್ಮರಿಸುತ್ತಾರೆ. 2000ದಲ್ಲಿ ಸಂಪಾಜೆ, 2001ರಲ್ಲಿಸುಳ್ಯ ಹಾಗೂ 2002 ಏಪ್ರಿಲ್ 5 ರಂದು ಮಂಗಳೂರಿನಲ್ಲಿ ಕ್ರಾಂತಿವೀರರ ಸಂಸ್ಮರಣಾ ಕಾರ್ಯಕ್ರಮ ಆಯೋಜಿಸಿ ಜನರ ಮನದ ಸಂಶಯ, ಗೊಂದಲ ನಿವಾರಿಸಿ, 'ನಾವು ಇದುವರೆಗೆ ಕೇಳಿದ್ದೆಲ್ಲವೂ ಸತ್ಯ ಅಲ್ಲ' ಎಂಬ ತಿಳುವಳಿಕೆ ಕೊಡುವ ಕೆಲಸವನ್ನು ಮಾಡಿರುವ ದೇವಿಪ್ರಸಾದರು ಮಹತ್ವಾಕಾಂಕ್ಷೆಯಿರಿಸಿಕೊಂಡ ಆಶಾಜೀವಿ.

ಅಮರ ಕ್ರಾಂತಿಯ ವಿಷಯ ಪಠ್ಯ ಪುಸ್ತಕದಲ್ಲಿ ಸೇರ್ಪಡೆ, ಕ್ರಾಂತಿವೀರರ ವೀರಗಂಭ ಸ್ಥಾಪನೆ, ಅಂದಿನ ಆಯುಧಗಳ ವಸ್ತು ಸಂಗ್ರಹಾಲಯ, ವಿ. ವಿ. ಮಟ್ಟದಲ್ಲಿ ಅಧ್ಯಯನ ಪೀಠ ರಚನೆ, ಮಂಗಳೂರು-ಮಡಿಕೇರಿಗಳಲ್ಲಿ ಕ್ರಾಂತಿವೀರರ ಸ್ಮಾರಕ ನಿರ್ಮಾಣ, ಕ್ರಾಂತಿವೀರರ ಕುಟುಂಬಗಳನ್ನು ಈ ಸೇವೆಯಲ್ಲಿ ಒಳಗೊಳಿಸಿ ಪ್ರತೀ ವರ್ಷವು ರಚನಾತ್ಮಕವಾದ ರೀತಿಯಲ್ಲಿ ಅಮರ ಕ್ರಾಂತಿ ಉತ್ಸವಾಚರಣೆ ಮೊದಲಾದ ಕನಸುಗಳನ್ನು ಕಾಣುವ ದೇವಿ ಪ್ರಸಾದರು ಅದಕ್ಕಾಗಿ ಬೇರೆ ಬೇರೆ ಹಂತಗಳಲ್ಲಿ ಪ್ರಯತ್ನಿಸುತ್ತಿದ್ದಾರೆ.

ಈ ಎಲ್ಲಾ ಚಿಂತನೆಗಳ ಮಧ್ಯೆ ತನ್ನ ನೈಜ ಕಾಳಜಿಯಾದ ರಂಗಭೂಮಿಯ ಸೇವೆಯಲ್ಲಿ ಅವರು ಹಿಂದೆ ಬಿದ್ದಿಲ್ಲ.

**ರಂಗಭೂಮಿ ಮತ್ತು ಎನ್. ಎಸ್. ಡಿ.:**

ತಂದೆಯವರ ಪಟೇಲ್ ಗಿರಿ ಮತ್ತು ಸಮಾಜ ಸೇವಾ ವೈಖರಿಯಿಂದ ಸಹಜವಾಗಿ ಆರಂಭದಲ್ಲಿ ದೇವಿಪ್ರಸಾದರು ಆಕರ್ಷಿತರಾದದ್ದು ಸಮಾಜಸೇವೆ ಕಡೆಗೆ. ಸಹಕಾರ ಹಾಗೂ ಸಂಘ ಸಂಸ್ಥೆಗಳಲ್ಲಿ ಪದಾಧಿಕಾರಿಯಾಗಿ ದುಡಿದ ಅನುಭವದೊಂದಿಗೆ ಸಮಾಜ ಸೇವೆಯ ಸೋಗಿನ ವೇದಿಕೆಯಾದ ರಾಜಕೀಯದಲ್ಲೂ ಕೈಯಾಡಿಸಿದರು. ಆದರೆ ಅಲ್ಲಿ ಹೆಚ್ಚು ಕಾಲ ಉಳಿಯಲಿಲ್ಲ. ಇವೆಲ್ಲ ಥೆಂಕ್ಲೆಸ್ಸ್ ಜಾಬ್. ನೀವು ಏನಾದರೂ ಬರೆಯಿರಿ, ಅದು ಯಾವತ್ತೂ ಶಾಶ್ವತವಾಗಿ ಉಳಿಯುತ್ತದೆ ಎಂಬ ಹೆಸರಾಂತ ಹಾಸ್ಯ ಸಾಹಿತಿ 'ಬೀಚಿ'ಯವರ ಮಾತಿನ ಅಂತರಾರ್ಥ ಅರಿವಾದಾಗ, ನನ್ನಂತಹವನಿಗೆ ರಾಜಕೀಯ ಹೇಳಿದುದಲ್ಲವೆಂದು ಹೊರಬಂದರು. ಮತ್ತೆಂದೂ ರಾಜಕೀಯ ಚಿಂತನೆ ಮಾಡಿದವರಲ್ಲ. ಅವರ ಒಲವು ರಂಗಭೂಮಿ.

"ನಾಟಕ ಸಮಾಜಕ್ಕೆ ಹಿಡಿದ ಕನ್ನಡಿ" ನಾಟಕ ಸಾಹಿತ್ಯದ ಎಲ್ಲಾ ಪ್ರಕಾರಗಳ ಸಮ್ಮಿಲನ. ಆದರೆ ಬೇರೆ ಎಲ್ಲಾ ಕ್ಷೇತ್ರಗಳಂತೆ ರಂಗಭೂಮಿಯನ್ನು ಜೀರ್ಣಿಸಿಕೊಳ್ಳುವುದು ಸುಲಭವಲ್ಲ. ಇಲ್ಲಿ

ಬೇಕಾಗಿರುವುದು ನಿರಂತರ ಪರಿಶ್ರಮ ಮತ್ತು ಆರ್ಥಿಕ ವ್ಯಯ. ಹಾಗಾಗಿ ಹೆಚ್ಚಿನವರು ಈ ಕಡೆಗೆ ಒಲವು ತೋರಿಸುವುದಿಲ್ಲ. ಒಂದು ವೇಳೆ ಒಲವು ತೋರಿಸಿ ಬಂದರೂ ಹೆಚ್ಚು ಕಾಲ ಉಳಿಯುವುದಿಲ್ಲ. ಆದರೆ ದೇವಿಪ್ರಸಾದರು ಈ ಎರಡೂ ಬಗೆಯ ತ್ಯಾಗಕ್ಕೆ ಮೈಯೊಡ್ಡಿದವರು ತನ್ನ ಮನೆಯನ್ನೇ ರಂಗ ದೇಗುಲವಾಗಿ ಪರಿವರ್ತಿಸಿದವರು. ನಾಡಿನ ಹೆಸರಾಂತ ರಂಗ ನಿರ್ದೇಶಕರು, ನಾಟಕ ಕಾರರು ಹಾಗೂ ಸಾಹಿತಿಗಳನ್ನು ಮನೆಗೆ ಕರೆಸಿ ರಂಗಕಮ್ಮಟ ನಾಟಕ, ರಚನಾ ಕಮ್ಮಟ ವೇರ್ಪಡಿಸಿ ಖುಷಿ ಪಟ್ಟರು. ಬಸವಲಿಂಗಯ್ಯ, ಇಕ್ಬಾಲ್ ಅಹಮ್ಮದ್, ಎ. ಎಂ. ವಿಠಲ ಮೂರ್ತಿ, ರಥಂ ಥಿಯಾಮ್, ನಟರಾಜ ವಣಗಿ, ಲಕ್ಷ್ಮಿ ಕಬರಳ್ಳಿ ಚಿತ್ರನಟ ಬಿ. ಎಸ್. ರಾಮಣ್ಣ ರೈ, ಮೋಹನ್ ಸೋನಾ, ಗೋಪಾಡ್ಕರ್, ಐ. ಕೆ. ಬೊಳುವಾರು, ಜೀವನ್‌ರಾಂ ಸುಳ್ಯ ಹೀಗೆ, ರಂಗಭೂಮಿ ಚಿಂತಕರೊಡನೆ ಸಂವಾದವೇರ್ಪಡಿಸುವುದರ ಮೂಲಕ ತನ್ನ ಸಂವೇಧನೆಯನ್ನು ಹಂಚಿಕೊಂಡು ಕೃತಾರ್ಥರಾದವರು.

## ನಿಸರ್ಗದ ಮಡಿಲಿನ ರಂಗ ಮಂಚ :

ಸಂಪಾಜೆ ಪರಿಸರದಲ್ಲಿ ರಂಗ ಚಟುವಟಿಕೆಗಳಿಗೆ ಚಾಲನೆ ನೀಡಿದವರೆ ದೇವಿ ಪ್ರಸಾದರು. ಪರಿಸರದ ರಂಗಾಸಕ್ತರನ್ನೆಲ್ಲಾ ಕಲೆಹಾಕಿ ನಿರ್ಮಿಸಿದ "ನಿಸರ್ಗ" ರಂಗಮಂಚ ನಾಡಿನ ಜನರ ಬಹುದಿನಗಳ ಕನಸ್ಸನ್ನು ಸಾಕಾರಗೊಳಿಸಿತು. ರಂಗಮಂಚದಲ್ಲಿ ದೇವಿಪ್ರಸಾದರ ರಚನೆಯ "ಶಿರಾಡಿ ಭೂತ" ಇಕ್ಬಾಲ್ ಅಹಮ್ಮದ್‌ರ ನಿರ್ದೇಶನದಲ್ಲಿ ಬಸವಲಿಂಗಯ್ಯನವರ ಸಂಗೀತ ಸಂಯೋಜನೆಯಲ್ಲಿ ಪರಿಣಾಮಕಾರಿಯಾಗಿ ಮೂಡಿ ಬಂದ ಕೃತಿ. ನಾಡಿನ ಹಲವಾರು ಕಡೆ ಅನೇಕ ಪ್ರದರ್ಶಗಳನ್ನು ಕಂಡ ನಾಟಕ ಆಕಾಶವಾಣಿ ಹಾಗೂ ದೂರದರ್ಶನಗಳಲ್ಲಿ ಪ್ರದರ್ಶನ ಕಂಡು ಹಲವಾರು ಬಹುಮಾನಗಳನ್ನು ಬಗಲಿಗೆ ಹಾಕಿಕೊಳ್ಳುವಂತೆ ಮಾಡಿದ್ದು, ದೇವಿ ಪ್ರಸಾದರ ಸಾಧನೆಗೆ ಮೆರಗು ನೀಡಿತು. ದೇವಿ ಪ್ರಸಾದರ ನಿರ್ದೇಶನದಲ್ಲಿ ಅನಾವರಣಗೊಂಡ ಇನ್ನೊಂದು ನಾಟಕ ಕಂಬಾರರ "ಕಿಟ್ಟಿಯ ಕತೆ" ಯಕ್ಷಗಾನ ಶೈಲಿಯಲ್ಲಿ ಜನ ಮೆಚ್ಚುಗೆ ಪಡೆದ ಈ ನಾಟಕ ಅವರು ಓರ್ವ ಸಮರ್ಥ ನಿರ್ದೇಶಕ ಅನ್ನುವುದನ್ನು ಸಾಬೀತು ಪಡಿಸಿತು. ಅವರು ರಚಿಸಿದ ತಮ್ಮ ಮಾತೃಭಾಷೆ ಅರೆಗನ್ನಡ "ಹೇಂಗೀತ್-ಹೇಂಗಾತ್" ಇದೊಂದು ಉತ್ತಮ ಕೃತಿ.

ಸಂಚಾರಿ ನಾಟಕ ತಂಡಕ್ಕೆ ಆಶ್ರಯ ಎಲ್ಲಿ ಎಂದು ಆಲೋಚಿಸಿದರೆ ತಕ್ಷಣ ನೆನಪಾಗುವ ಹೆಸರು ಎನ್. ಎಸ್. ಡಿ. (ತಮಾಷೆಗೆ ನ್ಯಾಶನಲ್ ಸ್ಕೂಲ್ ಆಫ್ ಡ್ರಾಮಾ) ಅನ್ನುವುದುಂಟು. ನೀನಾಸಂ ತುಮರಿಯ ಕಿನ್ನರ ಮೇಳದ ನಾಟಕಗಳಲ್ಲದೆ ಮಣಿಪುರಿ ನಿರ್ದೇಶಕ ರಥಂ ಥಿಯಮ್‌ರ ಅಭಿಮನ್ಯು ನಾಟಕ ಪ್ರದರ್ಶನಗಳಿಗೆ ಅವಕಾಶ ಕಲ್ಪಿಸಿ ಹೊಸ ಅಲೆಯ ನಾಟಕಗಳ ಪರಿಚಯವನ್ನು ಸಂಪಾಜೆಯ ಜನತೆಗೆ ಮಾಡಿ ಆತ್ಮಾವಲೋಕನ ಮಾಡಿಸಿದವರು ದೇವಿಪ್ರಸಾದರು. ಅಂತರಾಷ್ಟ್ರೀಯ ಕಲಾವಿದರು ಸಂಪಾಜೆಯ ನೆಲದಲ್ಲಿ ಸಂಚರಿಸುವಂತೆ ಮಾಡಿದ ಕೀರ್ತಿಗೆ ಅವರು ಭಾಜನರಾಗುತ್ತಾರೆ.

ಶಾಲಾ ಮಕ್ಕಳಿಗೆ ಸಂಪಾಜೆ ಪರಿಸರದ ಆಯ್ದ ಶಾಲೆಗಳಲ್ಲಿ ಖ್ಯಾತ ರಂಗ ನಿರ್ದೇಶಕರಿಂದ ರಂಗ ಕಮ್ಮಟವೇರ್ಪಡಿಸಿ ಮಕ್ಕಳೂ ರಂಗಭೂಮಿಯ ಕಡೆ ಒಲವು ತೋರುವಂತೆ ಮಾಡಿದ ಹೆಗ್ಗಳಿಕೆ ದೇವಿ ಪ್ರಸಾದರದ್ದು. ಈ ವಿಶೇಷ ಯೋಜನೆಯಂತೆ ಮೂರು ಶಾಲೆಗಳ ವಿದ್ಯಾರ್ಥಿಗಳು ಹಾಗೂ ಅದ್ಯಾಪಕರಲ್ಲಿ ರಂಗಾಸಕ್ತಿಯನ್ನು ಕುದುರಿಸುವ ಪ್ರಯತ್ನ ಮಾಡಿರುತ್ತಾರೆ. ಅಲ್ಲದೆ ರಾಷ್ಟ್ರ ಪ್ರಶಸ್ತಿ ವಿಜೇತ, ಚಲನಚಿತ್ರ "ಮೂರು ದಾರಿಗಳು (ನಿರ್ದೇಶನ ಗಿರೀಶ್ ಕಾಸರವಳ್ಳಿ) ನಿರ್ಮಾಣ ಹಾಗೂ ಟೆಲಿ ಚಿತ್ರ 'ಅಪಹರಣ'ದ ನಿರ್ಮಾಣ ಹಾಗೂ ನಿರ್ದೇಶನ ವಹಿಸಿ ಯಶಸ್ವಿಯಾದ ದೇವಿ ಪ್ರಸಾದರು ಸಾಹಿತ್ಯ ಕ್ಷೇತ್ರದ ಎಲ್ಲಾ ಪ್ರಕಾರಗಳಲ್ಲೂ ತಾನು ಸೈ ಎನಿಸಿ ಕೊಂಡರು.

ಹೀಗೆ ದೇವಿಪ್ರಸಾದರ ಸಾಧನೆ ಪಟ್ಟಿ ಬೇರೆ ಬೇರೆ ರಂಗಗಳಲ್ಲಿ ಮುಂದುವರಿಯುತ್ತಲೆ ಹೋಗುತ್ತದೆ. ನಿರಂತರ ರಚನಾತ್ಮಕ ಚಿಂತನೆ ಸ್ಪಷ್ಟ ಯೋಜನೆಯ ಮೂಲಕ ಸಾಧನೆ ಮಾಡಿದ ಈ ಸಾಧಕನಿಗೆ ಈಗ ಅರುವತ್ತರ ಸಂಭ್ರಮ. ಅವರು ಇನ್ನಷ್ಟು ಸಾಧಿಸುವ ಆಸೆ ಹೊಂದಿದವರು ಅರುವತ್ತರ ನಂತರ ಇನ್ನಷ್ಟು ಕಾಲ ದೇವಿಪ್ರಸಾದರು ನಮ್ಮೊಂದಿಗಿದ್ದು ಸಾಧನೆಗೈಯುವಂತಾಗಲು ನಾಡಿನ ಸಜ್ಜನರ ಹೃತ್ಪೂರ್ವಕ ನೆರವು ಬೇಕಾಗಿದೆ. ಅವರ ಎಲ್ಲಾ ಯೋಜನೆಗಳಿಗೆ ಹೆಗಲಿಗೆ ಹೆಗಲು ಕೊಟ್ಟು ಆಧರಿಸಿರುವುದು ನಾಡಿನ ಕರ್ತವ್ಯ ಕೂಡಾ. ಹಾಗೆ ಮಾಡಿದಾಗ ಮಾತ್ರ ಅರುವತ್ತರ ಷಷ್ಟ್ಯಬ್ದ ತಾರೆಗೆ ಕೊಡುಗೆ ನೀಡಿದಂತಾಗುತ್ತದೆ.

- ಲೇಖಕ : ಜನಾರ್ಧನ ಕಣಕ್ಕೂರು

---

## ನಿಮಗಿದ್ ಗೊತ್ತುಟ್ಟಾ

ಇಂಗ್ಲೆಂಡಿನ ಕೆಂಟ್ ಪ್ರಾಂತ್ಯಲಿ ಇರ್ರು ಸೋಲ್‌ಅರ್ಮನೆಲಿ ತಿಂಗಳ್‌ಗಳನ ಸೂಚಿಸುವ ರೀತಿಲಿ 12 ಪ್ರಾಂಗಣನ, ಮತ್ತೆ ವಾರಗಳ್ನ ಸೂಚಿಸುವ ರೀತಿಲಿ 52 ಮೆಟ್ಲ್‌ಗಳನ್ನ, ಹಂಗೆ ದಿನಗಳ್ನ ಸೂಚಿಸುವ ರೀತಿಲಿ 365 ಬಾಗ್ಲ್‌ಗಳ್ನ ಇಟ್ಟ್ ಅರಮನೆನ ಕಟ್ಟೋಳೊ.

- ನಡುವಟ್ಟಿರ ಕಾಶೀ ಪಳಂಗಪ್ಪ.

---




ನಾಡಿನ ಆಗುಹೋಗುಗಳಿಗಾಗಿ ತಪ್ಪದೆ ಸಂಗಾತಿಯನ್ನು

ಒಲೆಗೊಂದರಂತೆ ಸದಸ್ಯರಾಗಿ ಕೊಂಡು

ಓದುವುದನ್ನು ಮರೆಯದಿರಿ




- ಸಂ -

---

ಎಲ್ಲ ಬಲ್ಲವರಿಲ್ಲ ಬಲ್ಲವರು ಬಹಳಿಲ್ಲ

# ಗಂಗಡಿಕಾರ ಒಕ್ಕಲಿಗರು :

ಒಕ್ಕಲಿಗ ಅಂದರೆ ಒಕ್ಕಲು ತನವನ್ನು ಮಾಡುವರೆಲ್ಲರು ಒಕ್ಕಲಿಗರು. ಚಿನ್ನದ ಕೆಲಸವನ್ನು ಮಾಡುವವರನ್ನು ಚಿನಿವಾರರೆಂದೂ ಮರದ ಕೆಲಸವನ್ನು ಮಾಡುವವರನ್ನು ಬಡಗಿ ಎಂದೂ ಬಟ್ಟೆ ನೇಯುವವರನ್ನು ನೇಕಾರರೆಂದೂ ಕರೆಯುವ ರೀತಿಯಲ್ಲಿ ಒಕ್ಕಲುತನ ಅಂದರೆ ಧಾನ್ಯವನ್ನು ಒಕ್ಕಲು ಮಾಡುವವರನ್ನು ಒಕ್ಕಲಿಗರೆಂದು ಹಳೆ ಮೈಸೂರಿನಲ್ಲಿ ಕರೆದರು. ಒಕ್ಕಲಿಗರೆಂದರೆ ಒಂದು ಜಾತಿಯಲ್ಲ. ಒಂದು ಕಸುಬಿನ ಹೆಸರು. ಒಕ್ಕಲಿಗರೆಂದು ಹೆಸರಿರುವ ಸೋಣಬ ಒಕ್ಕಲಿಗರಲ್ಲಿ ಕೆಲವರು ಲಿಂಗಾಯಿತರು ಇನ್ನು ಕೆಲವರು ವೈಷ್ಣವರು ಇದ್ದಾರೆ. ಇದೇ ರೀತಿ ಶರಪ ಒಕ್ಕಲಿಗರು ವ್ಯವಸಾಯಗಾರರಲ್ಲಿ ಅವರು ಕಬ್ಬಿಣದ ಕೆಲಸ ಮಾಡುವವರು ಸರ್ಕಾರದವರು ಇವರ ಜಾತಿ ಹೆಸರು ಶರ್ಪ ಒಕ್ಕಲಿಗರಾಗಿರುವುದರಿಂದ ಇವರನ್ನು ಒಕ್ಕಲಿಗರ ಗುಂಪಿಗೆ ಸೇರಿಸಿದ್ದಾರೆ. ಶರ್ಪ ಒಕ್ಕಲಿಗರು ಯಾ ಸಲಹುವ ಒಕ್ಕಲಿಗರು ಇವರು ಕಬ್ಬಿಣದ ಅದುರನ್ನು ಹೆಕ್ಕುವ ಕೆಲಸ ಮಾಡುತ್ತಿದ್ದರು. ಇವರು ಮರಸ್ಸು ಒಕ್ಕಲಿಗರು ಹಾಗೂ ಗಂಗಡಿಕಾರ ಒಕ್ಕಲಿಗರಂತೆ ಒಕ್ಕಲುತನ ಮಾಡುವವರಲ್ಲವಾದರೂ ಇವರನ್ನು ಒಕ್ಕಲಿಗರ ಗುಂಪಿಗೆ ಸೇರಿಸಿದ್ದಾರೆ.

ಅದೇ ರೀತಿ ನಾಮಧಾರಿ ಗೌಡರು ನಾವು ಒಕ್ಕಲಿಗರಲ್ಲವೆಂದು ವಾದಿಸುತ್ತಾರೆ. ಇವರ ಅಭಿಪ್ರಾಯದಲ್ಲಿ ಗೌಡರೆಂದು ಕರೆಯಲ್ಪಡುವವರೆಲ್ಲರೂ ಒಕ್ಕಲಿಗರಲ್ಲ ಎಂದು ವಾದಿಸುತ್ತಾರೆ.

ಈಗ ಗಂಗಡಿಕಾರ ಒಕ್ಕಲಿಗರು ಯಾರು ಎಲ್ಲಿಂದ ಬಂದರು ಅವರ ಭಾಷೆ ಯಾವುದು ಎಂದು ನೋಡೋಣ. ಮೈಸೂರು ಟ್ರೈಬ್ಸ್ ಅಂಡ್ ಕ್ಯಾಸ್ಟ್ ಸಂಪುಟ 3 ರ ಸರ್ಕಾರದ ಹಿಂದುಳಿದವರ ಪಟ್ಟಿಯಲ್ಲಿ ಒಂದೊಂದು ಸಲ ಒಂದೊಂದು ಜಾತಿಯ ಹೆಸರು ಸೇರಿಸುತ್ತಾರೆ. ಯಾ ಬಿಡುತ್ತಾರೆ. ಈಗ ಖಾಯಂ ಆದ ಹಿಂದುಳಿದ ಪಂಗಡಗಳ ಆಯೋಗ ಇರುವುದರಿಂದ ಜಾತಿವಾರು ಅಂಕಿ ಅಂಶಗಳನ್ನು ಜನಗಣತಿ ರೀತಿಯಲ್ಲಿ ಅಂಕಿ ಅಂಶಗಳನ್ನು ಸಂಗ್ರಹಿಸಿದರೆ ಮಾತ್ರ ಸರಿಯಾದ ನ್ಯಾಯ ಎಲ್ಲಾ ಹಿಂದುಳಿದ ಪಂಗಡಗಳಿಗೆ ಸಿಗಬಹುದು.

ಗಂಗಡಿಕಾರರು ಕನ್ನಡ ಭಾಷೆಯನ್ನು ಆಡುತ್ತಾರೆ. ಇವರಲ್ಲಿ ಎರಡು ಪಂಗಡಗಳಿದ್ದಾರೆ. ಒಂದು ಪಂಗಡದವರು ಪೆಟ್ಟಿಗೆಯುವರೆಂದೂ ಇನ್ನೊಂದು ಪಂಗಡದವರು ಬುಜ್ಜಣಿಗೆಯವರು. ಮೊದಲಿನವರು ಬಿದುರು ಬುಟ್ಟಿಯಲ್ಲಿ ಮದುವೆಯ ಸಾಮಾನುಗಳನ್ನು ಹೊತ್ತುಕೊಂಡು ಹೋಗುತ್ತಾರೆ. ಎರಡನೆಯವರು ಮದುವೆ ಸಾಮಾನುಗಳನ್ನು ಬುಟ್ಟಿಯಲ್ಲಿ ಹಾಕಿ ಮುಚ್ಚಿಟ್ಟು ಹೊತ್ತುಕೊಂಡು ಹೋಗುತ್ತಾರೆ.

ಇನ್ನೂ ಎರಡು ವರ್ಗದವರಿದ್ದಾರೆ. ಅವರಲ್ಲಿ ಒಂದು ಪಂಗಡದವರು "ಮಲ್ಲಜನ" ಎಂಬುದಾಗಿಯೂ ಇವರು ಈಶ್ವರನನ್ನು ಪೂಜಿಸುತ್ತಾರೆ. ದಾಸ ಜನ ಎಂಬ ಪಂಗಡದವರು ವಿಷ್ಣುವನ್ನು ಪೂಜಿಸುತ್ತಾರೆ. ದಾಸಜನರನ್ನು ಕೆಲವು ಸಲ ನಾಮಧಾರಿಗಳೆಂದು ಕರೆಯುತ್ತಾರೆ.

ಬುಜ್ಜಣಿಗೆ ಪಂಗಡದವರು ಧಾರೆ ಮದುವೆಯ ಪಂಗಡದವರೆಂದು ಕರೆಯುತ್ತಾರೆ. ಪೆಟ್ಟಿಗೆಯವರು ವೀಳ್ಯದ ಮದುವೆಯವರು ಎಂಬುದಾಗಿ ಕರೆಯಲ್ಪಡುತ್ತಾರೆ. ಇನ್ನೊಂದು ಪಂಗಡದವರು ಚೆಲ್ಲೂರು ಗಂಗಡಿಕಾರರು. ಇವರು ಸಸ್ಯಹಾರಿಗಳು ಇವರು ಮದ್ಯವನ್ನು ಕುಡಿಯುವುದಿಲ್ಲ.

ಗಂಗಡಿಕಾರರಿಗೆ ಗೋತ್ರ, (70 ಕುಲ) ಗಳಿವೆ. ಇವರಲ್ಲಿ ವಿವಾಹ ವಿಚ್ಛೇಧನ ಪದ್ಧತಿ ಇದೆ. ಗಂಗಡಿಕಾರರು ತಮ್ಮ ಆಸ್ತಿಯ ಹಕ್ಕನ್ನು ಪಾರಂಪರ್ಯವಾಗಿ ಪಡೆಯುತ್ತಾರೆ. ಇವರಲ್ಲಿ ದತ್ತು ಪದ್ಧತಿ ಇದೆ.

ಗಂಗಡಿಕಾರು ಶಿವ ಮತ್ತು ವಿಷ್ಣುವನ್ನು ಪೂಜಿಸುತ್ತಾರೆ ಇದಲ್ಲದೆ ಮಾರಿಯಮ್ಮ, ಬೀರೇ ದೇವರು, ಚಾಮುಂಡೇಶ್ವರಿ ಮುಂತಾದ ಇತರ ದೇವರು ದೇವತೆಗಳನ್ನು ಪೂಜಿಸುತ್ತಾರೆ. ಇವರು ಸತ್ತವರನ್ನು ಹೂಳುತ್ತಾರೆ.

ಗಂಗಡಿಕಾರರಿಗೆ ಕಟ್ಟೆ ಮನೆ ಪದ್ಧತಿ ಇದೆ. ಕಟ್ಟೆ ಮನೆ ವ್ಯವಸ್ಥೆಯನ್ನು ಗೌಡ ಯಜಮಾನ ಮುಖ್ಯಸ್ಥನಾಗಿರುತ್ತಾನೆ. ಯಜಮಾನ ಯಾ ಗೌಡನ ಆಜ್ಞೆಯನ್ನು ಇತರರು ಪಾಲಿಸಬೇಕು.

ಗಂಗಡಿಕಾರರ ಉಪಜಾತಿಗಳಾದ ಪೆಟ್ಟಿಗೆಯವರು ಬಿಜ್ಜಣಿಗೆಯವರು, ಮಲ್ಲಜನರು, ದಾಸ ಜನರು, ಒಂದು ಉಪಜಾತಿಯವರು ಇನ್ನೊಂದು ಉಪಜಾತಿಯವರೊಡನೆ ವಿವಾಹ ಸಂಬಂಧ ಬೆಳೆಸುತ್ತಾರೆ. ಗಂಗಡಿಕಾರ ಗಂಡಸು ತನ್ನ ಜಾತಿಗಿಂತ ಹೊರಗಿನ ಕನ್ಯೆಯನ್ನು ಮದುವೆಯಾದರೆ ಅದನ್ನು ಕೂಡಿಕೆ ಮದುವೆ ಎಂದು ಕರೆಯುತ್ತಾರೆ. ಗಂಗಡಿಕಾರು ಮೈಸೂರು ಮಂಡ್ಯ ಬೆಂಗಳೂರು ತುಮಕೂರು ಹಾಸನ ಚಿಕ್ಕಮಗಳೂರು ಶಿವಮೊಗ್ಗ ಜಿಲ್ಲೆಯಲ್ಲಿ ಹೆಚ್ಚಾಗಿ ನೆಲಸಿದ್ದಾರೆ.

ಇವರು ಗಂಗಾನದಿ ತೀರದಿಂದ ಬಂದವರಾದುದರಿಂದ ಗಂಗಡಿಕಾರರಾದರೆಂದು ಕೆಲವು ಚರಿತ್ರೆಕಾರರ ಅಭಿಪ್ರಾಯವಾದರೆ ಇನ್ನೂ ಕೆಲವರು ನಾಲ್ಕನೆ ಶತಮಾನದಲ್ಲಿ ದಕ್ಷಿಣ ಮೈಸೂರಿನ ಭಾಗದಲ್ಲಿ ಗಂಗ ವಂಶದ ರಾಜರು ಆಳುತ್ತಿದ್ದು ಆ ರಾಜ್ಯಕ್ಕೆ ಸೇರಿದ ಒಕ್ಕಲಿಗರಿಗೆ ಗಂಗಡಿಕಾರರೆಂದು ಹೆಸರು ಬಂತೆಂದು ಕೆಲವು ಚರಿತ್ರೆಕಾರರ ಅಭಿಪ್ರಾಯವಾಗಿದೆ.

ಇನ್ನೊಂದು ಅಂಶವನ್ನು ಇಲ್ಲಿ ಹೇಳುವುದು ಸಮಂಜಸವಾದೀತು. ಈಗಲೂ ಸಹ ಒರಿಸ್ಸಾ ರಾಜ್ಯದ ಕೊನಾರ್ಕ್‌ನ ಸೂರ್ಯ ದೇಗುಲದಲ್ಲಿ ರಥೋತ್ಸವ ಕಾಲದಲ್ಲಿ ಮೈಸೂರಿನ ಗಂಗ ವಂಶದ ಕುಡಿಯು ಅಲ್ಲಿಗೆ ತೆರಳಿ ಪೂಜೆ ಪುರಸ್ಕಾರ ಮಾಡಿ ರಥ ಎಳೆಯುದಕ್ಕೆ ಸಹಕರಿಸಿದ ನಂತರವೆ ತೇರು ಮುಂದೆ ಸಾಗಲ್ಪಡುತ್ತದೆ. ಇನ್ನೊಂದು ಪ್ರತೀತಿ ಏನೆಂದರೆ ಶ್ರೀ ರಾಮಚಂದ್ರನ ವಂಶ ಇಕ್ಷ್ವಾಕು ವಂಶದ ಕೊನೆಯ ರಾಜನೆ ಗಂಗಾತೀರದಲ್ಲಿ ಆಳಿದ್ದು ನಂತರದ ವಂಶದವರು ಗಂಗವಾಡಿಯಲ್ಲಿ

ರಾಜ್ಯವಾಳಿದರೆಂದು ಇದೇ ಗಂಗರು + ಹಾಡಿ ಗಂಗವಾಡಿಯಾಗಿದೆ ಎಂದು ಸಹ ತಿಳಿದು ಬಂದಿದೆ.

**ಗೌಡರು ಮತ್ತು ದಕ್ಷಿಣ ಕನ್ನಡ ಗೌಡ ಪದ್ಧತಿಗಳಿಗೂ ಗಂಗಡಿಕರ ಗೌಡರ ಪದ್ಧತಿಗಳಿಗೂ ಇರುವ ವ್ಯತ್ಯಾಸ ಈ ಕೆಳಗಿನಂತಿದೆ.**

| | ಗೌಡರ ಪದ್ಧತಿ | ಗಂಗಡಿಕಾರ ಪದ್ಧತಿ |
|---|---|---|
| ಭಾಷೆ | ಅರೆಗನ್ನಡ (ನಡುಗನ್ನಡ) ಮತ್ತು ತುಳು | ಕನ್ನಡ |
| ಗೋತ್ರ | 18 ಗೋತ್ರಗಳಿವೆ. ಮನುಷ್ಯನ ಗುಣ ಮತ್ತು ಜಾತಿಯ ಹೆಸರಿನಿಂದ ಹೆಸರಿಸುತ್ತಾರೆ. | 70 ಗೋತ್ರಗಳಿವೆ. ಇವರು ಮರ ಮತ್ತು ಪ್ರಾಣಿಗಳ ಹೆಸರಿಸಿ ಗೋತ್ರ ಹೇಳುತ್ತಾರೆ. |
| ಉಪಜಾತಿ | ಗೌಡರಿಗೆ ಉಪ ಜಾತಿಗಳಿಲ್ಲ | ಇವರಲ್ಲಿ ಉಪಜಾತಿಗಳು ಇವೆ. 1) ಪೆಟ್ಟಿಗೆಯವರು 2) ವೀಳ್ಯದ ಮದುವೆಯವರು |
| ಆರಾಧನೆ | ಇವರು ತಿರುಪತಿ ವೆಂಕಟರಮಣನನ್ನು ಕುಲ ದೇವರಾಗಿ ಪೂಜಿಸುತ್ತಾರೆ. ಇವಲ್ಲದೆ ಚಾಮುಂಡೇಶ್ವರಿ, ಶಾಸ್ತಾವು ಕೆಂಚಿರಾಯ, ಜೋಗಿ ಅಲ್ಲದೆ ಗುಳಿಗ, ಪಂಜುರ್ಲಿ ಪಾಶಾಣ ಮೂರ್ತಿ, ಭೂತ ಇತ್ಯಾದಿಗಳನ್ನು ಆರಾಧಿಸುತ್ತಾರೆ. | ಇವರಲ್ಲಿ ವಿಷ್ಣುವನ್ನು ಪೂಜಿಸುವವರಿದ್ದಾರೆ. ಇವರನ್ನು ದಾಸಜನ ಎಂದು ಕರೆಯುತ್ತಾರೆ. ಶಿವನನ್ನು ಪೂಜಿಸುವವರನ್ನು ಮಲ್ಲಜನರೆಂದು ಕರೆಯುತ್ತಾರೆ. ಇವರಿಗೆ ಕಾಲ ಭೈರವೇಶ್ವರ ದೇವರು ಆದಿಚುಂಚನಗಿರಿ ಮಠದಲ್ಲಿದೆ. ಈ ದೇವರು ಇವರ ಮನೆ ದೇವರು ಭೈರವೇಶ್ವರ. |
| ಶವ ಸಂಸ್ಕಾರ | ಇವರು ಸತ್ತವರನ್ನು ಸುಡುತ್ತಾರೆ. ಅವಿವಾಹಿತರನ್ನು ಹೂಳುತ್ತಾರೆ. (ಇನ್ನು ಹತ್ತು ಹಲವು ವ್ಯತ್ಯಾಸಗಳಿವೆ) | ಇವರು ಸತ್ತವರನ್ನು ಹೂಳುತ್ತಾರೆ. ಸುಡುವುದಿಲ್ಲ. (ಮುಂದುವರೀಯುವುದು) ಲೇಖನ : ಪ್ರೊ॥ ಪೂಜಾರಿ ಮೊಣ್ಣಪ್ಪ |

# "ಪೆನ್ನು ಕೊಡಿ ಸಾರ್"

## ಲಘು ಪ್ರಬಂಧ :

ನಾನು ಕೈಯೂರು ಶಾಲೆಗೆ ಮೇಸ್ಟ್ರಾಗಿ ಹೋಗಿ ಇನ್ನೂ ತಿಂಗಳಾಗಿರಲಿಲ್ಲ. ಅಲ್ಲಿಯ ಪರಿಸರದ ಪೂರ್ಣ ಪಾಠ ನನಗಿನ್ನೂ ಆಗಿರಲಿಲ್ಲ. ಒಂದು ದಿನ ನೋಡಿ ನನ್ನ ಜೀವವೆ ನಡುಗುವಂತ ಪ್ರಸಂಗ ನಡೆಯಿತು. ಅಂದು ನಾನು ಬೆಳಗ್ಗೆ ಶಾಲೆಗೆ ಹೋಗಿ ಆಫೀಸಿನ ಬೀಗ ತೆಗೆದು ಒಳಗೆ ಮುಗ್ಗಿದ್ದೇ... ತಡ, ಹಿಂದಿನಿಂದ ಒಬ್ಬ ಆಸಾಮಿ ಎದುಸಿರು ಬಿಡುತ್ತಾ ಆಫೀಸಿಗೆ ನುಗ್ಗಿಯೇ ಬಿಟ್ಟ. ಅವನ ಅವತಾರ ನೋಡಿ ನನಗೆ ಹಣೆ, ಮೈಯೆಲ್ಲಾ ಬೆವರಲಿಕ್ಕೆ ಶುರುವಾಯಿತು. ಮುಖದ ಮೇಲೆಲ್ಲಾ ರಕ್ತದ ಚುಕ್ಕೆಗಳು, ಬಟ್ಟೆಯಲ್ಲಿ ರಕ್ತದ ಕಲೆ, ಕೈಗಳೆರಡು ರಕ್ತದಲ್ಲಿ ಅದ್ದಿ ತೆಗೆದಂತಿದ್ದವು. ನೆಲಕ್ಕೆ ನಾಲ್ಕು ಹನಿ ರಕ್ತವು ಬಿದ್ದು ಬಿಟ್ಟಿತು. ಅಯ್ಯೋ ದೇವರೇ ನನಗೇನು ಗ್ರಹಚಾರ ಕಾದಿದೆಯಪ್ಪಾ ಈ ಭೀಮ ಯಾವ ದ್ರೌಪದಿಯ ಶಪತ ನೆರವೇರಿಸಲು ಯಾರ ಎದೆಯನ್ನು ಬಗೆದು ಬಂದಿದ್ದಾನೋ, ಎರಡು ದಿನದ ಹಿಂದಷ್ಟೇ ಎರಡು ಗುಂಪಿನ ನಡುವೆ ಹೋರಾಟ ನಡೆದು ಅವರು ತಳ್ಳಾಡಿಕೊಂಡು ನಮ್ಮ ಶಾಲೆಯ ಬೇಲಿ ಪಕ್ಕಕ್ಕೆ ಬಂದು ಅಲ್ಲಿ ಬಿದ್ದ ಒಬ್ಬ ವ್ಯಕ್ತಿಯ ಚೀರಾಟ ಕೇಳಿ ಬೇಗ ಬೇಗ ತರಗತಿಗಳಿಗೆ ಬೀಗ ಹಾಕಿಸಿ ಮಕ್ಕಳನ್ನು ಮನೆಗೆ ಹೋಗುವಂತೆ ಸೂಚಿಸಿ ನಾನು ಕಛೇರಿಗೆ ಬೀಗ ಜಡಿದು ಸಂಜೆ 3-30 ಗಂಟೆಗೆ ಶಾಲೆಯಿಂದ ಕಾಲು ಕಿತ್ತಿದ್ದೆ. ಈಗ ಇದು ಬೇರೆ. ಹೆಣ ಶಾಲಾ ಆವರಣದ ಒಳಗೆ ಬಿದ್ದಿದೆಯೋ, ಹೊರಗೊ ಎಂದು ಮೊದಲು ತಿಳಿದು ಕೊಳ್ಳಬೇಕಾಗಿತ್ತು. ಅದಕ್ಕೆ ಈ ವ್ಯಕ್ತಿಯನ್ನು ಕುರಿತು ಎಲ್ಲಿ ಬಿದ್ದಿದೇರಿ........ ಎಂದೆ ಅದಕ್ಕವ ಹೊಳೆ ಕೆರೆಲಿ ಸಾರ್ ನಿಮ್ಗೆ ಬೇಕಾ.... ಹಂದಿ ಮಾಡ್ತಿದ್ವೆ, ಮಾಸ್ಟ್ರ ಹತ್ರ ಮಾಂಸದ ಲೆಕ್ಕ ಬರೆದುಕೊಳ್ಳಲು ಪೆನ್ನು ತೆಗೆದುಕೊಂಡು ಬಾ ಅಂತ ಕಳಿಸಿದ್ರು ಸಾ ಎಂದ. ವಿಷಯ ತಿಳಿದ ಮೇಲೂ ನನಗೆ ಸಹಜ ಸ್ಥಿತಿಗೆ ಬರಲು ಕೆಲಕಾಲ ಹಿಡಿಯಿತು.

ಲೇಖನ : ಕುಂಭಗೌಡನ ರಂಜಿತ್,
ಮಕ್ಕಂದೂರು. Ph: 233729

ಒಡಲು ತಾನಳಿವಲ್ಲಿ ಮಡದಿಯರು ಕೆಡುವಲ್ಲಿ

# 'ಭಾರತರತ್ನ'ಗೆ ರಾಷ್ಟ್ರೋತ್ಥಾನದ ಕನಸು



ಭಾರತ ಉಪ ಖಂಡದ ದಕ್ಷಿಣದ ತುತ್ತ ತುದಿಯಲ್ಲಿರುವ ತಮಿಳುನಾಡಿನಲ್ಲಿ ಈಗ ಎಲ್ಲಿಲ್ಲದ ಸಡಗರ. ದೇಶಕ್ಕೆ ಪ್ರಥಮ ಪ್ರಜೆಯನ್ನು ಕರುಣಿಸುವ ಭಾಗ್ಯ ಈ ನಾಡಿಗೆ ದೊರೆತದ್ದು ಯೋಗ ಯೋಗವೆಂದೇ ಹೇಳಬೇಕು. ಈಗ ರಾಷ್ಟ್ರಪತಿ ಹುದ್ದೆಗೆ ಸರ್ವಸಮ್ಮತ ಅಭ್ಯರ್ಥಿಯಾಗಿ ಹೊರ ಹೊಮ್ಮಿರುವ 'ಭಾರತೀಯ ಕ್ಷಿಪಣಿಗಳ ಜನಕ' ಎಂದೇ ಖ್ಯಾತರಾದ ಡಾ. ಅವುಲ್ ಪಕೀರ್ ಜೈನುಲ್ಲಾಬ್ದೀನ್ ಅಬ್ದುಲ್ ಕಲಾಂ' ಈ ನಾಡಿನ ಹೆಮ್ಮೆಯ ಕೂಸು. ಭಾರತೀಯ ಬಾಹ್ಯಾಕಾಶ ಕೇಂದ್ರ (ಇಸ್ರೋ) ದಲ್ಲಿ 20 ವರ್ಷಗಳ ಕಾಲ ದುಡಿದ ತಂತ್ರಜ್ಞಾನ ಕ್ಷೇತ್ರದಲ್ಲಿ ಭಾರತಕ್ಕೆ ವಿಶ್ವ ಮಾನ್ಯತೆ ತಂದುಕೊಟ್ಟ ಕಲಾಂ 'ತಂತ್ರಜ್ಞಾನ ರಾಷ್ಟ್ರ ಶಕ್ತಿಯ ಮೂಲ' ಎಂದೇ ನಂಬಿದವರು.

ಒಮ್ಮೆ ಸಂದರ್ಶನದಲ್ಲಿ ಕಲಾಂ ಹೇಳಿದ್ದರು, 'ನಾವು ಪ್ರಗತಿಪರ ದೇಶವೆಂಬ ಹಣೆಪಟ್ಟಿ ಕಳಚಿಕೊಂಡು ಪ್ರಬುದ್ಧ ಮತ್ತು ಶ್ರೀಮಂತ ದೇಶವೆಂಬ ಮಾನ್ಯತೆ ಪಡೆಯಬೇಕಾದರೆ ಮೂರು ಸಂಗತಿಗಳು ಅತಿ ಮುಖ್ಯ. ಅವುಗಳೆಂದರೆ, ಆರ್ಥಿಕವಾಗಿ ಸಮರ್ಥ ರಾಷ್ಟ್ರವಾಗಬೇಕು. ಎರಡನೆಯದಾಗಿ ರಾಷ್ಟ್ರೀಯ ಭದ್ರತೆಯಲ್ಲಿ ಸ್ವಾವಲಂಬನೆ ಸಾಧಿಸಬೇಕು. ವಿಶ್ವ ವೇದಿಕೆಯಲ್ಲಿ ಉನ್ನತ ಘನತೆ ಮತ್ತು ಗುಣಮಟ್ಟವನ್ನು ಕಾಯ್ದುಕೊಳ್ಳಬೇಕು'. ಕಲಾಂ ಇದೇ ಹಾದಿಯಲ್ಲಿ ಮುನ್ನಡೆದರು ಎಂಬುದಕ್ಕೆ ಅವರು ನಡೆದುಬಂದ ಹಾದಿಯೇ ಸಾಕ್ಷಿ.

**ರಾಮೇಶ್ವರದ ಕುಡಿ :** ಅಬ್ದುಲ್ ಕಲಾಂ ಹುಟ್ಟಿದ್ದು 1931 ರ ಅಕ್ಟೋಬರ್ 15 ರಂದು, ತಮಿಳುನಾಡಿನ ರಾಮೇಶ್ವರಂನಲ್ಲಿ. ರಾಮನಾಥಪುರಂ ಮತ್ತು ತಿರುಚಿರಪಳ್ಳಿಯಲ್ಲಿ ಪ್ರಾಥಮಿಕ ಶಿಕ್ಷಣ ಮುಗಿಸಿದ ಕಲಾಂ, ಮದ್ರಾಸ್ ಇನ್‌ಸ್ಟಿಟ್ಯೂಟ್ ಆಫ್ ಟೆಕ್ನಾಲಜಿಯಲ್ಲಿ ಎಂಜಿನಿಯರಿಂಗ್‌ನಲ್ಲಿ ಪರಿಣತಿ ಪಡೆದು, 1958 ರಲ್ಲಿ ರಕ್ಷಣಾ ಸಂಶೋಧನೆ ಮತ್ತು ಅಭಿವೃದ್ಧಿ ಸಂಸ್ಥೆಗೆ ಸೇರಿಕೊಂಡರು. 1963 ರಲ್ಲಿ ಇಸ್ರೋ ಸೇರಿ, ಕೆಲವು ವರ್ಷಗಳ ನಂತರ ಎಸ್ ಎಲ್ ವಿ -3 ಯೋಜನೆಯ ನಿರ್ದೇಶಕರಾದರು. ಈ ಸಂದರ್ಭದಲ್ಲಿ ಕ್ಷಿಪಣಿ ತಂತ್ರಜ್ಞಾನದ ಅಭಿವೃದ್ಧಿಯ ಚುಕ್ಕಾಣಿ ಹಿಡಿದ ಕಲಾಂ ದೇಶೀಯ ಉಪಗ್ರಹ ಉಡಾವಣಾ ನೌಕೆಯನ್ನು ಪ್ರಥಮ ಬಾರಿಗೆ ರೂಪಿಸಿ, ರೋಹಿಣಿ ಉಪಗ್ರಹವನ್ನು ಭೂ ಕಕ್ಷೆಗೇರಿಸಿದರು. 1982 ರಲ್ಲಿ ರಕ್ಷಣಾ ಸಂಶೋಧನೆ ಮತ್ತು ಅಭಿವೃದ್ಧಿ ಸಂಸ್ಥೆಗೆ ಮರಳಿದರು.

ದೇಶೀಯ ಕ್ಷಿಪಣಿಗಳಿಗಾಗಿ ರೂಪಿತವಾದ ಸಮಗ್ರ ನಿರ್ದೇಶಿತ ಕ್ಷಿಪಣಿ ಅಭಿವೃದ್ಧಿ ಯೋಜನೆ ಕಲಾಂನ ಕನಸಿನ ಕುಡಿ. ಮುಂದೆ 1992 ರಿಂದ 1999 ರವರೆಗೆ ಕೇಂದ್ರ ರಕ್ಷಣಾ ಇಲಾಖೆಯ ವೈಜ್ಞಾನಿಕ ಸಲಹೆಗಾರರಾಗಿ ದೇಶದ ವಿಜ್ಞಾನ ಕ್ಷೇತ್ರಕ್ಕೆ ಆಸರೆಯಾಗಿದ್ದರು. ನಂತರ ಕಳೆದ ವರ್ಷದವರೆಗೆ, ಭಾರತ ಸರಕಾರದ ಪ್ರಧಾನ ವೈಜ್ಞಾನಿಕ ಸಲಹೆಗಾರರಾಗಿ ಕೆಲಸ ಮಾಡುತ್ತಿದ್ದರು. ಕಲಾಂ ಮಾರ್ಗದರ್ಶನದಲ್ಲಿ ಮಾಹಿತಿ ತಂತ್ರಜ್ಞಾನ-ಭವಿಷ್ಯ ಮತ್ತು ಪರಾಮರ್ಷೆ ಮಂಡಳಿ ಸಿದ್ಧಪಡಿಸಿದ "ದಿಕ್ಸೂಚಿ- 2020" ವರದಿಯಲ್ಲಿ ಭಾರತ 2020ರ ವೇಳೆಗೆ ವೈಜ್ಞಾನಿಕ ಕ್ಷೇತ್ರದಲ್ಲಿ ಸಾಧಿಸಲಿರುವ ಪ್ರಗತಿಯ ಮುನ್ನೋಟವಿದೆ. ಅಲ್ಲದೆ, ಅವರು ತಮ್ಮ ಪುಸ್ತಕ "ಭಾರತ 2020 ನೂತನ ಸಹಸ್ರಮಾನದ ದಿಕ್ಸೂಚಿ"ಯಲ್ಲಿ ಪ್ರಬುದ್ಧವಾಗಿ ಅಭಿವೃದ್ಧಿ ಹೊಂದಿದ ಭಾರತದ ಕನಸು ಕಂಡಿದ್ದಾರೆ.

**ಅವಿವಾಹಿತ ಸಸ್ಯಾಹಾರಿ:** ಹಲವಾರು ಬಾರಿ ವೈಜ್ಞಾನಿಕ ವಿಷಯಗಳಿಗೆ ಸಂಬಂಧಿಸಿದಂತೆ ಅಮೆರಿಕಕ್ಕೆ ಭೇಟಿ ನೀಡಿರುವ ಈ ಅವಿವಾಹಿತ ಮತ್ತು ಸಸ್ಯಾಹಾರಿ ಅಣು ವಿಜ್ಞಾನಿ. ಒಬ್ಬ ಪರಿಪೂರ್ಣ ಭಾರತೀಯ. ಸ್ವತಃ ವೀಣಾ ವಾದಕರಾಗಿರುವ ಇವರು ಕಲೆ ಮತ್ತು ವಿಜ್ಞಾನಿಗಳ ಅಪರೂಪದ ಸಂಗಮ.

ಭಾರತ ಸರ್ಕಾರದಿಂದ ಪದ್ಮಭೂಷಣ 1984) ಪದ್ಮವಿಭೂಷಣ (1990) ಮತ್ತು ಭಾರತ ರತ್ನ (1997) ಗಳಿಂದ ಪುರಸ್ಕೃತರಾಗಿರುವ ಇವರಿಗೆ ಸಂದಿರುವ ಗೌರವ ಪದವಿಗಳು ಲೆಕ್ಕವಿಲ್ಲದಷ್ಟು. ಸಹೋದ್ಯೋಗಿಗಳು ಕಲಾಂರನ್ನು ಶೇ 200ರಷ್ಟು ಭಾರತೀಯ ವಿಜ್ಞಾನಿ ಎಂದೇ ಗುರುತಿಸುತ್ತಾರೆ. ಕೆಲವೇ ದಿನ ನಾಸಾಕ್ಕೆ ಭೇಟಿ ನೀಡಿದ ಕಾರಣಕ್ಕಾಗಿ ಕಲಾಂ ನಮ್ಮಲ್ಲಿ ತರಬೇತಾದ ವಿಜ್ಞಾನಿ ಎಂದು ಹೇಳಿಕೊಳ್ಳಲು ಅಮೆರಿಕನ್ನರೂ ಹೆಮ್ಮೆ ಪಡುತ್ತಾರೆ.

ಕಲಾಂ ತಮ್ಮ ವಿನೂತನ ಕಾರ್ಯವಿಧಾನದಿಂದ ಇಪ್ಪತ್ತನೆಯ ಶತಮಾನದಲ್ಲಿ ದೇಶದ ಕ್ಷಿಪಣಿ ತಂತ್ರಜ್ಞಾನಕ್ಕೆ ದಾರಿದೀಪವಾಗಿದ್ದಲ್ಲದೆ ಇಪ್ಪತ್ತೊಂದನೇ ಶತಮಾನದ ತಂತ್ರಜ್ಞಾನಕ್ಕೆ ಮುನ್ನುಡಿಯನ್ನು ಬರೆದಿದ್ದಾರೆ.

-ಸಂಗಾತಿ

ಒಡಲೆಂಬ ಹುತ್ತಕ್ಕೆ ನುಡಿವ ನಾಲಗೆ ಸರ್ಪ

# ಮಾನವನ ಮಹಾ ಶತ್ರು - ಕೀಳರಿಮೆ

'ಕೀಳರಿಮೆ' ಪ್ರತಿಯೊಬ್ಬರ ಪ್ರಗತಿ ಪಥದಲ್ಲಿಯ ದೊಡ್ಡ ಅಡೆತಡೆ. ಮನುಷ್ಯನ ಪರಿಪೂರ್ಣತೆಗೆ ಪ್ರಹಾರ ನೀಡುವ ಪ್ರಬಲ ವೈರಿ. ಮಾನವನ ಶ್ರೇಯಸ್ಸಿಗೆ ಸಂಕೋಲೆಗಳನ್ನು ಬಿಗಿಯುವ ಮಹಾಪೀಡೆ. ವ್ಯಕ್ತಿಯ ಆತ್ಮವಿಶ್ವಾಸ, ಆತ್ಮಶಕ್ತಿ, ಆತ್ಮಶ್ರದ್ಧೆಗಳನ್ನೆಲ್ಲಾ ಸ್ವಾಹಾ ಮಾಡುವ ಮಹಾ ಬಕಾಸುರ. ಕೀಳರಿಮೆ ಮಾನವನ ಧೈರ್ಯ, ಛಲಗಳನ್ನು ಕೊಂದು ಅವನನ್ನು ಸತ್ವಹೀನನನ್ನಾಗಿಸುತ್ತದೆ. ಮನೋ ವಿಜ್ಞಾನಿಗಳು ಕೀಳರಿಮೆಯ ಕುರಿತಾದ ತಮ್ಮ ಅನುಭವದ ಮಾತುಗಳನ್ನು ಹೀಗೆ ಹೇಳುತ್ತಾರೆ. 'ಕೀಳರಿಮೆ ಮನುಕುಲದ ಪ್ರಬಲ ಶತ್ರು' ಇದು ಒಮ್ಮೆ ವ್ಯಕ್ತಿಯ ಮನಸ್ಸನ್ನಾವರಿಸಿದರಾಯ್ತು ಅದು ಅವನನ್ನು ತುಂಬ ಅಧೋಗತಿಗೊಯ್ಯುತ್ತದೆ. ಕೆಲವೊಮ್ಮೆ ಮನಸ್ಸಿನಾಳದಿಂದ ಅತ್ಯಂತ ಒರಟಾದ ಪಾಶವೀಯ ಪ್ರವೃತ್ತಿಗಳನ್ನು ಹೊರತಂದು ದೊಡ್ಡ ಅನಾಹುತಗಳನ್ನುಂಟುಮಾಡುತ್ತದೆ.

ಕೀಳರಿಮೆಯ ಕರಾಳ ಕೈಗಳು ಅತ್ಯಂತ- ಬಲಿಷ್ಠವಾಗಿರುತ್ತದೆ. ಅದು ಕೇವಲ ವ್ಯಕ್ತಿಗಳನ್ನಷ್ಟೇ ಅಲ್ಲ ಇಡೀ ಸಮಾಜವನ್ನು ಇಡೀ ರಾಷ್ಟ್ರವನ್ನು ದುರ್ಬಲಗೊಳಿಸುವ ಅಸುರ ಶಕ್ತಿಯನ್ನು ಹೊಂದಿದೆ. ಕೀಳರಿಮೆಯ ಭೂತ ಸಮಾಜಕ್ಕೆ ಅಂಟಿಕೊಂಡಿದ್ದೆ ತಡ ನಮ್ಮಲ್ಲಿಯ ಬದುಕಿನ ಉನ್ನತ ವ್ಯವಸ್ಥೆಯಾದ ವರ್ಣ ವ್ಯವಸ್ಥೆ ಜಾತಿಗಳಾಗಿ ಮಾರ್ಪಟ್ಟಿತು. ನಮ್ಮ ಸಮಾಜ ಮೇಲು-ಕೀಳು ಭಾವನೆಯ ಬಿರುಗಾಳಿಗೆ ಸಿಕ್ಕು ತಮ್ಮ ಅಸ್ತಿತ್ವವನ್ನೆ ಬದಲಿಸಿಕೊಂಡಿತು. ಒಂದು ಕಾಲದಲ್ಲಿ 'ಮಾನವ ಕುಲವೊಂದೇ' ಎಂದು ಹೇಳಿದ ವೈದಿಕ-ಸಂಸ್ಕೃತಿ ಮುಂದೆ ಕೀಳರಿಮೆಗೆ ಸಿಲುಕಿ ಇಡೀ ಸಮಾಜವನ್ನೇ ಜಾಲಾಡಿಬಿಟ್ಟಿತು. ಈ ಕೀಳರಿಮೆಯಿಂದ ನಮ್ಮ ಸಮಾಜ ಇನ್ನೂ ಹೊರಬಂದಿಲ್ಲ ಎಂಬುದು ಕೀಳರಿಮೆಯ ಅಸುರೀ ಶಕ್ತಿಯ ಪ್ರತೀಕವಾಗಿದೆ.

ಭರತನ ಈ ಭೂಮಿ ಮಹಾ ಪರಾಕ್ರಮಿಗಳ ಬೀಡು. ರಾಮ, ಪರುಶುರಾಮ, ಅರ್ಜುನ, ಅಭಿಮನ್ಯು, ಭೀಷ್ಮರಂಥ ಅತಿರಥ ಮಹಾರಥರಿಗೆ ಜನ್ಮ ನೀಡಿದ ಪುಣ್ಯಭೂಮಿಯಿದು. ಚಂದ್ರಗುಪ್ತ ಮೌರ್ಯ, ಸಾಮ್ರಾಟ್ ಅಶೋಕ, ಪೌರವ, ಹರ್ಷವರ್ಧನ ಮುಂತಾದ ವೀರಾಧಿವೀರರ ಐತಿಹಾಸಿಕ-ತಾಣವಿದು. ಇಂಥ ವೀರರ ಈ ನೆಲ ಸುಮಾರು ೨೦೦ ವರ್ಷಗಳ ಕಾಲ ಬ್ರಿಟಿಷರ ವಶದಲ್ಲಿರಲು ಇದಕ್ಕೆ ಕಾರಣ ಭಾರತೀಯರಲ್ಲಿದ್ದ ಕೀಳರಿಮೆ! ತಕ್ಕಡಿ ಹಿಡಿದು ಬ್ರಿಟಿಷರು ಭಾರತಕ್ಕೆ ಬಂದಾಗಲೇ ಭಾರತದಲ್ಲಿ ರಾಜ-ರಾಜರುಗಳಲ್ಲಿ ಜಾತಿ-ಜಾತಿಗಳಲ್ಲಿ ಕೀಳರಿಮೆಯಿತ್ತು. ಈ ಮಹಾಪಾತಕವನ್ನೇ ಪರಮ ಕೊಡುಗೆಯಾಗಿ ಸ್ವೀಕರಿಸಿದ ಆಂಗ್ಲರು ತಮ್ಮ ಒಡೆದು ಆಳುವ ನೀತಿಯನ್ನು ಅನುಸರಿಸಿ ಭಾರತೀಯರಲ್ಲಿ ಇನ್ನಷ್ಟು ಕೀಳರಿಮೆ ಬೆಳೆಸಿ ದುರ್ಬಲರನ್ನಾಗಿಸಿದರು. ನಮ್ಮ ಈ ಕೀಳರಿಮೆ ನಮ್ಮನ್ನು ೨೦೦ ವರ್ಷಗಳ ಕಾಲ ಗುಲಾಮರನ್ನಾಗಿಸಿತ್ತು ಎಂದಾಗ ಅದರ ಶಕ್ತಿಯ ಅರಿವು ಯಾರಿಗಾದರೂ ಆಗುತ್ತದೆ.

ನಮ್ಮ ಕೀಳರಿಮೆಗೆ ನಾವೇ ಕಾರಣರು. ಕಾರಣಾಂತರಗಳಿಂದ ನಮ್ಮ ಮನಸ್ಸು ಒಮ್ಮೆ ಕೀಳರಿಮೆಗೊಳಗಾಯಿತೆಂದರೆ ಅದರಿಂದ ಹೊರ ಬರಲು ಭಗೀರಥ ಪ್ರಯತ್ನವೇ ಬೇಕು. ಪಾಂಡಿತ್ಯದಲ್ಲಿ ಸಾಮಾಜಿಕ ಸ್ಥರದಲ್ಲಿ, ಆರ್ಥಿಕ ಸ್ಥಿತಿಯಲ್ಲಿ ಆಂಗ್ಲರು ನಮಗಿಂತ ಶ್ರೇಷ್ಠರು ಎಂಬ ಕೀಳರಿಮೆ ಭಾರತೀಯರಲ್ಲಿ ಬಂದದ್ದೇ ನಮ್ಮ ಗುಲಾಮಗಿರಿಗೆ ಕಾರಣವಾಯಿತು. ಪ್ರತಿಯೊಬ್ಬ ಮನುಷ್ಯ ಧನ್ಯಾತ್ಮನು ಹಾಗೂ ಭಗವಂತನ ಅಂಶ ಎಂದು ನಂಬಿದ್ದ ಹಿಂದೂ ಧರ್ಮವೇ ಗ್ಲಾನಿಗೊಳಗಾಯಿತು. ಭಾರತೀಯರ ಆತ್ಮವಿಶ್ವಾಸ, ಆತ್ಮಶ್ರದ್ಧೆ ಘಾಸಿಗೊಂಡಿತು. ಇಂತಹ ಸಂದರ್ಭವನ್ನು ವಿನಿಯೋಗಿಸಿಕೊಂಡ ಆತ್ಮವಿಶ್ವಾಸವುಳ್ಳ ತಾನು ಶ್ರೇಷ್ಠ ಎಂದು ನಂಬಿದ್ದ ಇಂಗ್ಲೆಂಡಿನ ಒಬ್ಬ ಬಡ ಕಾರಕೂನ ರಾಬರ್ಟ್ ಕ್ಲೈವ್ ಭಾರತದಲ್ಲಿ ಬ್ರಿಟಿಷ್ ಸಾಮ್ರಾಜ್ಯವನ್ನೇ ಕಟ್ಟಿ ಮೆರೆದ. ಇದನ್ನೇ ಭಗವದ್ಗೀತೆ ಹೀಗೆ ಹೇಳುತ್ತದೆ. ಮನುಷ್ಯ ತನ್ನನ್ನು ತಾನು ಉದ್ಧರಿಸಿಕೊಳ್ಳಬೇಕು. ತನಗೆ ತಾನೇ ಬಂಧು, ತನಗೆ ತಾನೇ ಶತ್ರು. ಎಂದರೆ ತನ್ನ ಒಳಿತು ಹಾಗೂ ಕೆಡುಕುಗಳಿಗೆ ಮನುಷ್ಯನೇ ಕಾರಣ.'

ಸ್ವಾಮಿ ವಿವೇಕಾನಂದರು ಈ ದೇಶದ ಜನರನ್ನು ಮಾತೃಭೂಮಿಯನ್ನು ಉದ್ಧರಿಸಲು ಜೀವ ಸವೆಯಿಸಿದ ಮಹಾನ್ ಚೇತನ. 'ಏಳಿ! ಎದ್ದೇಳಿ, ಗುರಿ ತಲುಪುವವರೆಗೂ ನಿಮ್ಮ ಹೋರಾಟ ನಡೆದೇ ಇರಲಿ' ಎಂದು ಹೇಳುತ್ತ ದೇಶದುದ್ದಕ್ಕೂ ಸಂಚರಿಸಿದ ಸ್ವಾಮಿ ವಿವೇಕಾನಂದರು ಭಾರತೀಯರ ಆತ್ಮಶಕ್ತಿಯನ್ನು ಪ್ರಜ್ವಲಿಸಲು ಪಟ್ಟ ಪ್ರಯತ್ನ ನಿಜಕ್ಕೂ ಸ್ಮರಣಾರ್ಹ. ಅವರು ಹೇಳಿದರು -'ತನ್ನನ್ನು ಇತರರಿಗಿಂತ, ಅಶಕ್ತನೆಂದು ಪಾಪಿಯೆಂದು ಭಾವಿಸುವುದೇ ಅತಿದೊಡ್ಡ ಪಾಪ. ನೀವು ಏನನ್ನಾದರೂ ನಂಬಬೇಕಿದ್ದರೆ ನೀವು ಪವಿತ್ರಾತ್ಮರೆಂದೂ, ಭಗವಂತನ ಅಂಶವೆಂದೂ ದೇವರ ಅನಂತಶಕ್ತಿ ಹಾಗೂ ಮತ್ತು ಆನಂದದ ಪಾಲುಗಾರರೆಂದು ನಂಬಿರಿ. ನಾವು ನಮ್ಮ ದೇಶದ ಗಡಿಯನ್ನು ದಾಟಿ ವಿಶ್ವದ ಮುಂದುವರೆದ ರಾಷ್ಟ್ರಗಳೊಡನೆ ಸ್ಪರ್ಧಿಸಬೇಕಾಗಿದೆ. ಅವರು ನಮಗೆ ನೀಡುವ ಜಯ ವಿಶ್ವ ಅದ್ಭುತ ರಹಸ್ಯಗಳಿಗೆ ಬದಲಾಗಿ ಆಧ್ಯಾತ್ಮಿಕ ಲೋಕದ ಮಹಾನ್ ಧ್ಯೇಯಾಂಶಗಳನ್ನು ನೀಡುವ ಸಾಮರ್ಥ್ಯ ನಮ್ಮಲ್ಲಿದೆ. ನಾವು ಸದಾ ವಿದ್ಯಾರ್ಥಿಗಳಾಗಿರದೆ ಗುರುಗಳೂ ಆಗಬೇಕಿದೆ. ಕೀಳರಿಮೆ, ಸ್ವಾಭಿಮಾನ ಶೂನ್ಯತೆಯನ್ನು ಬುಡಸಹಿತ-ಕಿತ್ತು ಹಾಕಿ ಭಾರತದ ಅಭಿವೃದ್ಧಿಗೆ ಮುನ್ನುಡಿ ಬರೆಯಬೇಕಾಗಿದೆ'.

ಈ ಭೂಮಿಯ ಮೇಲೆ ಹುಟ್ಟಿದ ಪ್ರತಿಯೊಬ್ಬರಿಗೂ ಅವರದೇ ಆದ ಅಸ್ತಿತ್ವವಿದೆ; ಸ್ವಾಭಿಮಾನವಿದೆ. ಬದುಕನ್ನು ಭವ್ಯವಾಗಿ ರೂಪಿಸಿಕೊಳ್ಳುವ ಅವಕಾಶವಿದೆ. ಯಾರೂ ಮೇಲಲ್ಲ. ಯಾರೂ ಕೀಳಲ್ಲ. ಸರ್ವರೂ ಸಮಾನರು. ಆದರೆ ಬುದ್ಧಿವಂತ ಪ್ರಾಣಿ ಮಾನವ. ತನ್ನ ವೈಚಾರಿಕ ಶಕ್ತಿಯಿಂದ ಬೆಳೆಯಬೇಕು. ಸಾದಕ - ಭಾದಕಗಳನ್ನು ಅರಿತು ಮುಂದುವರಿಯಬೇಕು. ತನ್ನ ಮುನ್ನಡೆಯಲ್ಲಿ ಸ್ವಾರ್ಥವೇ ಪ್ರಧಾನವಾಗಬಾರದು. ಅದರಿಂದ ಇತರರಿಗೂ ಪ್ರಯೋಜನವಾಗಬೇಕು. ಬದುಕು ಕಾಲಾಧೀನ ನೀರ ಮೇಲಿನ ಗುಳ್ಳೆಯಿದು, ಯಾವಾಗ ಒಡೆಯುತ್ತದೋ ಯಾರು ಬಲ್ಲರು. ಕಾರಣ ಇದ್ದಾಗಲೆಲ್ಲ ನಾವು ಹೆಸರು ಮಾಡಬೇಕು. ನಾಲ್ಕು ಜನರಿಗೆ ಸಹಾಯಕರಾಗಬೇಕು. ಅವರ ದುಃಖವನ್ನು

ದೂರ ಮಾಡಬೇಕು. ಇದರಲ್ಲೇ ಬದುಕಿನ ಸಾರ್ಥಕತೆ ಇದೆ. ನಮ್ಮಲ್ಲಿ ಏನೆಲ್ಲ ಸಾಧಿಸುವ ಸಾಮರ್ಥ್ಯವಿದೆ; ಅದ್ಭುತ ಶಕ್ತಿಯಿದೆ. ಅದನ್ನು ಸಾರ್ಥಕವಾಗಿ ವಿನಿಯೋಗಿಸಿಕೊಳ್ಳುವ ಜಾಣ್ಮೆ ಬೇಕು.

ಯಾವುದೇ ಸಮಯದಲ್ಲಾಗಲಿ, ಯಾವುದೇ ಕಾರಣಕ್ಕಾಗಲಿ ನೀವು ಇತರರಿಗಿಂತ ಕೀಳು ಎಂಬ ಭಾವನೆ ನಿಮ್ಮಲ್ಲಿ ಒಮ್ಮೆ ಬೆಳೆಯಿತೆಂದರೆ ಅದು ನಿಮ್ಮ ಬದುಕನ್ನೇ ನಿತ್ಯಹೀನಗೊಳಿಸುತ್ತದೆ. ಇದು ನಮಗೆ ನಾವೇ ಮಾಡಿಕೊಳ್ಳುವ ಅಪಚಾರ. ಸೃಷ್ಟಿಕರ್ತನು ನಮ್ಮನ್ನು ಹುಟ್ಟಿಸುವಾಗ ಎಲ್ಲರಂತೆಯೇ ಸಮಾನವಾಗಿ ಹುಟ್ಟಿಸಿರುತ್ತಾನೆ. ಅವನ ದೃಷ್ಟಿಯಲ್ಲಿ ಸರ್ವರೂ ಸಮಾನರು. ಇಂತಿರುವಾಗ ನಾವೇ ನಮ್ಮನ್ನು 'ಕೀಳು' ಎಂದು ಪರಿಗಣಿಸಿದರೆ ಅದು ನಾವು ನಮ್ಮ ಸೃಷ್ಟಿಕರ್ತನಿಗೆ ಮಾಡಿದ ಅಪಚಾರವಾಗುತ್ತದೆ ಇದನ್ನೇ ಡಿ. ವಿ. ಗುಂಡಪ್ಪನವರು ಹೀಗೆ ಹೇಳುತ್ತಾರೆ.

**'ಅವರೆಷ್ಟು ಧನವಂತರ್ ಇವರೆಷ್ಟು**
**ಬಲವಂತರ್ ಅವರೆಷ್ಟು ಯಶವಂತರ್**
**ಎನ್ನುವ ಕರುಬಿನಲ್ಲಿ ಭವಿಕ - ನಿನಗೆಷ್ಟಿಹುದೋ**
**ಮರೆತು ನೀಂ ಕೊರಗುವುದು ಶಿವನಿಗೆ**
**ಕೃತಘ್ನತೆಯೇ?' - ಮಂಕುತಿಮ್ಮ**

ಬೇರೆಯವರ ಶ್ರೀಮಂತಿಕೆ, ಬಲ, ಯಶಸ್ಸುಗಳನ್ನೆ ಚಿಂತಿಸುತ್ತ ಕಾಲ ಹರಣ ಮಾಡಿದರೆ, ನಾವು ನಮ್ಮತನ ಮರೆಯುವುದೆಂದು ಎಂದು ಗುಂಡಪ್ಪನವರು ಪ್ರಶ್ನಿಸುತ್ತಾರೆ. ಮಾನವ ಜನ್ಮ ಶ್ರೇಷ್ಠ ಜನ್ಮ. ಬಹು ಜನ್ಮದ ಪುಣ್ಯದ ಫಲದಿಂದ ಮಾನವ ಜನ್ಮಕ್ಕೆ ಬಂದಿದ್ದೇವೆ. ಇದರ ಸದುಪಯೋಗವನ್ನು ನಾವು ಪಡೆದುಕೊಳ್ಳಬೇಕು. ಅದುವೇ ಮಾನವ ಜನ್ಮದ ಶ್ರೇಷ್ಠತೆ. ಇಲ್ಲದಿದ್ದರೆ ನಮಗೆ ಮಾನವ ಜನ್ಮದ ಶ್ರೇಷ್ಠತೆ. ಇಲ್ಲದಿದ್ದರೆ ನಮಗೆ ಮಾನವ ಜನ್ಮದ ಭಾಗ್ಯ ದಯಪಾಲಿಸಿದ ಆ ಶಿವನಿಗೆ ಕೃತಘ್ನತೆ ಗೈದಂತಾಗುತ್ತದೆ ಎಂಬ ಭಾವವನ್ನು ಕವಿ ಡಿ. ವಿ. ಜಿ.ಯವರು ತುಂಬ ಮಾರ್ಮಿಕವಾಗಿ ವಿವರಿಸಿದ್ದಾರೆ.

ಬದುಕಿನಲ್ಲಿ ಬೇವು - ಬೆಲ್ಲ ಪ್ರತಿಯೊಬ್ಬರಿಗೂ ಇದ್ದೆ ಇರುತ್ತವೆ. ಅವುಗಳಿಗಾಗಿ ಹಿಗ್ಗುವುದು ಕುಗ್ಗುವುದು ಸರಿಯಲ್ಲ. ಸಿಹಿ-ಕಹಿಗಳನ್ನು ಸಮನಾಗಿ ಸ್ವೀಕರಿಸಿ ಮುನ್ನಡೆಯಬೇಕು. ಪ್ರತಿಯೊಬ್ಬನೂ ತಾನು ಇತರರಿಗಿಂತ ಉತ್ತಮ ಎಂದು ತಿಳಿದುಕೊಳ್ಳಬೇಕು. ಹಾಗೆಯೇ ತಾನೇ ಸರ್ವೋತ್ತಮನಲ್ಲ. ತನಗಿಂತ ಬೇರೆ ಕೆಲವರು ಉತ್ತಮರಿದ್ದಾರೆ ಎಂದು ತಿಳಿದುಕೊಳ್ಳಬೇಕು. ಆ ಉತ್ತಮರ ದಾರಿಯಲ್ಲಿ ನಡೆಯಲು ಪ್ರಯತ್ನಿಸಬೇಕು. ಎಲ್ಲರಿಗಿಂತ ಕೀಳು ತಾನಲ್ಲ' ಎಂಬ ಸ್ವಾಭಿಮಾನವಿರಬೇಕು. ಹಾಗೆಯೇ ಎಲ್ಲರಿಗಿಂತ ತಾನು ಶ್ರೇಷ್ಠ ಎಂಬ ಅಹಂಕಾರವೂ ಸಲ್ಲದು.

ಈ ಸಮಾಜವೇ ವಿಚಿತ್ರವಾಗಿದೆ. ಈ ಲೌಕಿಕ ಪ್ರಪಂಚದಲ್ಲಿ ಬಿದ್ದ ಆನೆಗೆ ಕಲ್ಲು ಹೊಡೆಯುವವರೇ ಹೆಚ್ಚು. ಹಾಗೆಯೇ ಸಲಗ ಎದುರಿಗೆ ಬಂದಾಗ ದೂರ ಸರಿಯುತ್ತಾರೆ. ಹಾಗೆಯೇ ಆನೆ ಹೋಗುವಾಗ ಬೊಗಳುವ ಶ್ವಾನಗಳೂ ಸಾಕಷ್ಟಿರುತ್ತವೆ. ಬೊಗಳುವ ನಾಯಿ ಕಚ್ಚುವುದಿಲ್ಲ. ಯಾರದೊ ತೆಗಳಿಕೆಗೆ ನಾವು ತಲೆಬಾಗಿಸಬೇಕಾಗಿಲ್ಲ. 'ಸಂತೆಯಲ್ಲೊಂದು ಮನೆ ಮಾಡಿ ಗದ್ದಲಕ್ಕಂಜಿದರೆ' ಹೇಗೆ? ಈ ಲೌಕಿಕ ಪ್ರಪಂಚದಲ್ಲಿ ಬಗ್ಗಿದವನಿಗೆ 'ಗುದ್ದು' ಎಂಬುದು ನೆನಪಿರಲಿ. ನಾವು ಸ್ವಲ್ಪ ಬಾಗಿದರೆ ಸಾಕು ಇನ್ನೂ ಹೆಚ್ಚು ಜನ ಬಾಗಿಸಲು ಪ್ರಯತ್ನ ಪಡುತ್ತಾರೆ.

'ಬಾಗಬೇಡ',ಬಗ್ಗಬೇಡ' ಎಂದರೆ ಸೋಲೊಪ್ಪಿ ಕೊಳ್ಳಬೇಡ ಎಂದರ್ಥ. ಆದರೆ ಕೆಲವು ಸಂದರ್ಭಗಳಲ್ಲಿ ನಾವು ಬಾಗಬೇಕಾಗುತ್ತದೆ. ಗುರು ಹಿರಿಯರಿಗೆ ಬಾಗಿ ನಮ್ರತೆಯಿಂದ ನಮಸ್ಕರಿಸಬೇಕು. ದೇವರಿಗೆ ಭಕ್ತಿಯಿಂದ ಬಾಗಬೇಕು. ಹೆತ್ತವರಿಗೆ ಮಣಿದು ವಂದಿಸಬೇಕು. ಇಲ್ಲಿ ಬಾಗುವಿಕೆಗೆ ಒಂದು ಉನ್ನತ ಸ್ಥಾನವಿದೆ. ಗುರುಹಿರಿಯರಿಗೆ ಪೊಡಮಡುವುದು ಮಾನವ ಜನ್ಮದ ಒಳ್ಳೆಯ ಗುಣಗಳಲ್ಲಿ ಒಂದು.

ಕೀಳರಿಮೆ ಬಹುದೊಡ್ಡ ಅಂಟುಜಾಡ್ಯ. ಅದು ನಮ್ಮ ಅಧೋಗತಿಗೆ ಕಾರಣವಾಗುತ್ತದೆ. ಅವನು ಮೇಲು - ನಾನು ಕೀಳು ಎಂಬ ಭಾವನೆ ಎಂದಿಗೂ ಬೆಳೆಯಬಾರದು. ಎಲ್ಲರೂ ನೀವೂ ಮನುಷ್ಯರೇ ಆಗಿದ್ದು, ಎಲ್ಲರಲ್ಲೂ ಸೃಜನ ಶೀಲತೆಯಿದೆ. ಕ್ರಿಯಾಶೀಲ ಗುಣವಿದೆ. ಅದನ್ನು ಜಾಗೃತಗೊಳಿಸಿ ಯಶಸ್ವಿ ಮನುಷ್ಯರಾಗಬೇಕು.

**-ಬರಹ : ಎನ್. ಆರ್. ಪಾಟೀಲ್**

---

# ರೇಬೀಸ್‌ಗೆ ಕರಬೂಜ ದಿವ್ಯ ಔಷಧ!

ಹುಚ್ಚುನಾಯಿ ಕಡಿದರೆ ಹೊಟ್ಟೆಯ ಸುತ್ತ ಹದಿನಾಲ್ಕು ಇಂಜೆಕ್ಷನ್ ಚುಚ್ಚಿಸಿಕೊಳ್ಳುವ ಅವಶ್ಯಕತೆ ಇಲ್ಲ. ನಿಮ್ಮ ಮುದ್ದಿನ ನಾಯಿ ಮರಿಯನ್ನೂ ರೇಬೀಸ್‌ನಿಂದ ಪಾರು ಮಾಡಲು ಒಂದು 'ಕರಬೂಜದ ಹಣ್ಣು' ಸಾಕು!

ಹೀಗೆನ್ನುತ್ತಾರೆ ಕೃಷಿ ವಿಶ್ವವಿದ್ಯಾನಿಲಯದ ಜೈವಿಕ ತಂತ್ರಜ್ಞಾನ ವಿಭಾಗದ ಮುಖ್ಯಸ್ಥರು. ರೇಬೀಸ್ ಭೀಕರ ಕಾಯಿಲೆ. ಇದಕ್ಕೊಂದು ಶಾಶ್ವತ ಪರಿಹಾರ ಕಂಡು ಹಿಡಿದಿದ್ದಾರೆ ಕೃಷಿ ವಿವಿಯ ಜೈವಿಕ ತಂತ್ರಜ್ಞಾನ ವಿಜ್ಞಾನಿಗಳು. ಕರಬೂಜದ ಹಣ್ಣಿನಿಂದ ರೇಬೀಸ್ ನಿರೋಧಕ ಲಸಿಕೆ ಸಂಶೋಧಿಸಲಾಗಿದೆ. ಕರಬೂಜದಲ್ಲಿ ಕುಲಾಂತರಿ ಸಸ್ಯಗಳನ್ನು ಅಭಿವೃದ್ಧಿ ಪಡಿಸಿ ಈ ರೋಗ ನಿರೋಧಕ ಲಸಿಕೆ ಆವಿಷ್ಕರಿಸಲಾಗಿದೆ ಎಂದು ಜೈವಿಕ ತಂತ್ರಜ್ಞಾನ ವಿಭಾಗದ ಮುಖ್ಯಸ್ಥ ಡಾ. ಟಿ. ಕೆ. ಸಿದ್ಧರಾಮೇಗೌಡ ಇತ್ತೀಚೆಗೆ ಪತ್ರಿಕಾ ಗೋಷ್ಠಿಯಲ್ಲಿ ತಿಳಿಸಿದ್ದಾರೆ.

ರೇಬೀಸ್ ನಿಯಂತ್ರಣಕ್ಕೆ ಜೈವಿಕ ತಂತ್ರಜ್ಞಾನದ ಮೂಲಕ ಹೊಸ ತಳಿಯೊಂದನ್ನು ಕಂಡುಹಿಡಿಯಲಾಗಿದೆ ಎಂದಿದ್ದಾರೆ.

**- ಸಂಗಾತಿ**

---

ಓದಿ ಬೂದಿಯ ಪೂಸಿ ತೇದು ಕಾವಿಯ ಹೊದೆದು

# ನಾಟ್ಯ ರಾಣಿ ಶಾಂತಲೆ ಜೈನಳಲ್ಲ, ಶೈವಳು : ದೇಜಗೌ

ಹೊಯ್ಸಳ ದೊರೆ ವಿಷ್ಣುವರ್ಧನನ ಪಟ್ಟದರಸಿ ಶಾಂತಲೆ ಜೈನಳಲ್ಲ. ಆಕೆ ಶೈವಳು ಎಂಬ ವಾದಕ್ಕೀಗ ಪುಷ್ಠಿ ದೊರಕಿದೆ.

ಈ ಹಿಂದಿನ ಇತಿಹಾಸಕಾರರೆಲ್ಲ ನಾಟ್ಯರಾಣಿ ಶಾಂತಲೆಯನ್ನು ಜೈನ ಧರ್ಮದವಳೆಂದು ಪ್ರತಿಪಾದಿಸಿದ್ದರು. ಆದರೆ ಹಿರಿಯ ಸಾಹಿತಿ ಡಾ. ದೇಜಗೌ ಅವರು ನಡೆಸುತ್ತಿರುವ ಸಂಶೋಧನೆ ಇದಕ್ಕೆ ವ್ಯತಿರಿಕ್ತವಾದ ಅಂಶವನ್ನು ಬೆಳಕಿಗೆ ತಂದಿದೆ.

ವಿಷ್ಣುವರ್ಧನನ ಕಾಲದಲ್ಲಿ ಕಟ್ಟಿಸಿದಷ್ಟು ಕೆರೆಗಳನ್ನು ಯಾರೂ ಕಟ್ಟಿಸಿಲ್ಲ ಎಂಬ ಅಂಶವನ್ನು ಒತ್ತಿ ಹೇಳಿರುವ ದೇಜಗೌ, ಈ ಸಮಾಜ ಸೇವಾ ಕಾರ್ಯದಲ್ಲಿ ಶಾಂತಲೆಯ ಕಾಣಿಕೆ ಅಪಾರವಾಗಿತ್ತು. ಕೆರೆಗಳು ರೈತರಿಗೆ ನೆರವಾಗುವ ಉದ್ದೇಶದಿಂದ ನಿರ್ಮಾಣವಾದದ್ದಾಗಿದೆ. ಈ ಅಂಶ ಆಕೆ ರೈತ ಕುಟುಂಬದಿಂದ ಬಂದವಳು ಎಂಬುದಕ್ಕೆ ಪೂರಕವಾಗಿದೆ ಎಂದಿದ್ದಾರೆ.

ಚೋಳರ ಆಕ್ರಮಣದಿಂದಾಗಿ ಕನ್ನಡ ನಾಡು ತತ್ತರಿಸಿದ್ದ ಸಂದರ್ಭದಲ್ಲಿ ಹೊಯ್ಸಳ ದೊರೆ ವಿಷ್ಣುವರ್ಧನ ಅವರ ವಿರುದ್ಧ ಕಾದಾಡಿ ನಾಡಿನ ರಕ್ಷಣೆ ಮಾಡಿದನು. ವಿಷ್ಣುವರ್ಧನನು ರಣರಂಗದಲ್ಲಿ ದಿಗ್ವಿಜಯ ಸಾಧಿಸಲು ಆತನ ಪೌರುಷವಷ್ಟೇ ಕಾರಣವಲ್ಲ. ಆತನ ಪಟ್ಟದರಸಿ ಶಾಂತಲೆ ಸಹಕಾರ ಕೂಡ ಪ್ರಮುಖವಾದದ್ದು. ಗಂಡನ ಜೊತೆ ಸರಿಸಮನಾಗಿ ಹೋರಾಡಿ ಶತ್ರುಗಳಲ್ಲಿ ನಡುಕು ಹುಟ್ಟಿಸುತ್ತಿದ್ದ ಧೀರ ಮಹಿಳೆ ಶಾಂತಲೆ ಎಂದ ಡಾ. ದೇಜಗೌ, ಒಂದು ವೇಳೆ ಶಾಂತಲೆ ಜೈನಧರ್ಮಿಯಳಾಗಿದ್ದರೆ ಆಕೆಗೆ ಯುದ್ಧಾಸಕ್ತಿ ಇರುತ್ತಿರಲಿಲ್ಲ ಎಂದು ಅಭಿಪ್ರಾಯಪಟ್ಟಿದ್ದಾರೆ.

## ಗಂಗಡಿಕಾರ ಒಕ್ಕಲಿಗರು :

ರಾಣಿ ಶಾಂತಲೆ ಜೈನಳಲ್ಲ. ಆಕೆ ಜೈನ ಧರ್ಮಿಯರಿಗೆ ಪ್ರೋತ್ಸಾಹ ನೀಡಿರಬಹುದು ನಿಜ. ಆದರೆ ಇದು ರಾಜಧರ್ಮದಿಂದ ಮಾಡಿದ ಕಾರ್ಯ. ಶಾಂತಲೆ ಗಂಗಡಿಕಾರ ಒಕ್ಕಲಿಗರು ಎಂಬುದಕ್ಕೆ ಸಾಕಷ್ಟು ಪುರಾವೆಗಳಿವೆ ಎಂಬುದು ದೇಜಗೌ ವಾದವಾಗಿದೆ.

ಕೃಷ್ಣರಾಜಪೇಟೆ ತಾಲೂಕಿನ ಮಾಳಾಗೂರು[1](ಶಾಸನದಲ್ಲಿ ಮಾಳಗೆ ಎಂದಿದೆ) ಎಂಬಲ್ಲಿ 5 ಪ್ರಮುಖ ದೇವಸ್ಥಾನಗಳಿವೆ. ಅದರಲ್ಲಿ ಕರ್ಮಟೇಶ್ವರ ಸಹ ಒಂದು. ಈ ದೇವರ ವರ ಪ್ರಸಾದದಿಂದಲೇ ಶಾಂತಲೆ ಹುಟ್ಟಿದಳು ಎಂದು ಶಾಸನದಲ್ಲಿ ತಿಳಿಸಿದೆ.

ತನಗೆ ನಿಷ್ಠವಾಗಿದ್ದ ಗರುಡರ ಹತ್ಯೆಯಿಂದ ಜಿಗುಪ್ಸೆಗೊಂಡ ಶಾಂತಲೆ ಆತ್ಮ ಹತ್ಯೆಮಾಡಿಕೊಳ್ಳಲು ಆಯ್ಕೆ ಮಾಡಿದ ಸ್ಥಳ ಶಿವಗಂಗೆ. ಈ ಅಂಶ ಆಕೆ ಶೈವಳು ಎಂಬುದಕ್ಕೆ ಪುಷ್ಠಿ ನೀಡುತ್ತದೆ ಎನ್ನುತ್ತಾರೆ ದೇಜಗೌ.

ವಿಷ್ಣುವರ್ಧನನಿಗೆ ಒಟ್ಟು ನಾಲ್ವರು ಹೆಂಡತಿಯರು. ಅವರಲ್ಲಿ ಶಾಂತಲೆ ಪಟ್ಟದರಸಿ. ಉಳಿದವರೆಂದರೆ ಬಮ್ಮಲೆ, ರಾಜಲೆ ಹಾಗೂ ಲಕ್ಷ್ಮಿ. ಇವರಲ್ಲಿ ಕಡೆಯ ಹೆಂಡತಿ ಲಕ್ಷ್ಮಿ ಮೇಲೆ ವಿಷ್ಣುವರ್ಧನನಿಗೆ ವಿಪರೀತ ಮೋಹ. ಬಹುಶಃ ವಯಸ್ಸಾದ ನಂತರ ಮದುವೆಯಾದ ಕಾರಣದಿಂದಲೋ ಏನೋ, ಲಕ್ಷ್ಮಿ ಕಂಡರೆ ಅಷ್ಟೊಂದು ಅಕ್ಕರೆ. ಲಕ್ಷ್ಮಿ ಕಡೆ ವಾಲಿದ ರಾಜ, ಶಾಂತಲೆಯನ್ನು ಕಡೆಗಣಿಸುತ್ತಾನೆ.

ತನ್ನ ಮಕ್ಕಳಿಗೆ ಪಟ್ಟ ಕಟ್ಟಬೇಕು ಎಂಬ ಉದ್ದೇಶದಿಂದ ಲಕ್ಷ್ಮಿ, ಶಾಂತಲೆಯ ಇಬ್ಬರು ಗಂಡು ಮಕ್ಕಳನ್ನು ಅನ್ಯಾಯ ಮಾರ್ಗದಿಂದ ಕೊಲೆ ಮಾಡಿಸುತ್ತಾಳೆ. ಈ ಘಟನೆಯಿಂದ ಬೇಸರಗೊಂಡ ಶಾಂತಲೆ ಜೀವನದಲ್ಲಿ ಜಿಗುಪ್ಸೆ ಹೊಂದುತ್ತಾಳೆ.

ಇದರ ಜೊತೆಗೆ, ರಾಣಿ ಶಾಂತಲೆ ಬೆಂಗಾವಲಿಗೆ ಲಕ್ಕಣ್ಣ ಮತ್ತು ಈರಣ್ಣ ಎಂಬ ಇಬ್ಬರು ಗರುಡರಿರುತ್ತಾರೆ (ಅಂಗರಕ್ಷಕರು). ಇವರಿಗೆ ರಾಣಿ ಮೇಲೆ ವಿಪರೀತ ಸ್ವಾಮಿನಿಷ್ಠೆ. ಇದನ್ನು ಸಹಿಸದ ಲಕ್ಷ್ಮಿ, ವಿಷ್ಣುವರ್ಧನನಿಗೆ ಈ ಬಗ್ಗೆ ಕಿವಿ ಹಿಂಡಿ, ಗರುಡರ ಜೊತೆ ರಾಣಿಗೆ ಅನೈತಿಕ ಸಂಬಂಧವಿದೆ ಎಂದು ಸುಳ್ಳು ಹೇಳಿ, ಆ ಇಬ್ಬರನ್ನು ಹತ್ಯೆ ಮಾಡಿಸುತ್ತಾಳೆ. ತನ್ನಿಂದಾಗಿ ತನ್ನ ಗರುಡರು ಸಾಯುವಂತಾಯಿತಲ್ಲ ಎಂದು ಬೇಸರಪಟ್ಟ ರಾಣಿ ಶಾಂತಲೆ ಲಕ್ಕಣ್ಣ ಹಾಗೂ ಈರಣ್ಣರ ನೆನಪಿಗಾಗಿ ಅವರ ಪ್ರತಿಮೆ ಸ್ಥಾಪಿಸಿ, ಅನಂತರ ತಾನೂ ಆತ್ಮಹತ್ಯೆ ಮಾಡಿಕೊಳ್ಳುತ್ತಾಳೆ.

## ಸೇವೆ ಗುರುತಿಸಿಲ್ಲ:

ರಾಣಿ ಶಾಂತಲೆ ಕರ್ನಾಟಕಕ್ಕೆ ಸಲ್ಲಿಸಿರುವ ಸೇವೆ ಅಪಾರವಾದುದು. ಕನ್ನಡ ನಾಡನ್ನು ಚೋಳರಿಂದ ರಕ್ಷಿಸುವಲ್ಲಿ ವಿಷ್ಣುವರ್ಧನ ಶಾಂತಲೆ ಪಾತ್ರ ಪ್ರಮುಖವಾದದ್ದು. ಆದರೆ ದುರದೃಷ್ಟವಶಾತ್ ಯಾವ ವಿದ್ವಾಂಸರಾಗಲಿ, ಸರಕಾರವಾಗಲಿ ಈ ಕಡೆ ಗಮನ ಹರಿಸಿಯೇ ಇಲ್ಲ ಎಂದು ದೇಜಗೌ ವಿಷಾದದಿಂದ ನುಡಿದಿದ್ದಾರೆ.

ಲೇಖನ : ಕೆ. ಮಹೇಶ, ಕೊಳ್ಳೇಗಾಲ.

---

ಕಂಡದನು ಆಡಿದರೆ ಮಂಡಲವು ಮುನಿಯುವುದು

---

# ಸಾಹಿತ್ಯದಲ್ಲಿ ಅರೆಗನ್ನಡ (ಗಾಡ ಕನ್ನಡ) ಬಳಕೆಯ ಸಾಧ್ಯತೆಗಳು

***ಹಿನ್ನಲೆ ಅಥವಾ ಸಾಮಾಜಿಕ ಬದ್ಧತೆ :***

ಕನ್ನಡವೂ ಸೇರಿದಂತೆ ಯಾವುದೇ ಭಾಷೆಯಿರಲಿ ಅದು ತನ್ನ ಗ್ರಂಥಸ್ಥ ರೂಪಕ್ಕಿಂತ ಭಿನ್ನವಾದ ವ್ಯಾವಹಾರಿಕ ಲೋಕವನ್ನು ಹೊಂದಿದ್ದು ಆಡು ನುಡಿಯ ವಿವಿದ ಪ್ರಕಾರಗಳನ್ನು ಒಳಗೊಂಡಿರುತ್ತದೆ. ಅಲ್ಲದೆ, ಭಾಷೆಯೊಂದರ ವ್ಯಾಕರಣದ ಚೌಕಟ್ಟನ್ನು ಮೀರಿನಿಂತು ಸ್ವತಂತ್ರವಾಗಿ ಬಿಡುವ ಮತ್ತು ಭಾಷಾ ವಿಕಾಸದ ಹಂತದಲ್ಲಿ ಕೊಂಚ ಪಕ್ಕಕ್ಕೆ ಸರಿದು ಭಿನ್ನವಾಗಿ ಬಿಡುವ ಉಪಭಾಷೆಗಳ ಸಾಧ್ಯತೆಗಳೂ ಅಪಾರ. ಅಂತೆಯೇ ಕನ್ನಡವು ಧಾರವಾಡ ಕನ್ನಡ, ಹಳೇ ಮೈಸೂರು ಕನ್ನಡ, ಮಂಗಳೂರು ಕನ್ನಡ, ಆದಿಕರ್ನಾಟಕದ ಕನ್ನಡ, ಮಾದಿಗರ ಕನ್ನಡ ಮುಂತಾದ ಹಲವಾರು ಬಗೆಯ ಆಡುನುಡಿಗಳನ್ನು ಹೊಂದಿದ್ದು ಜತೆಗೆ ಅರೆಗನ್ನಡ, ನೀಲಗಿರಿಯ ಬಡಗರ ಕನ್ನಡ, ಹವ್ಯಕ ಕನ್ನಡ ಮೊದಲಾದ ಕೆಲವು ಉಪಭಾಷೆಗಳನ್ನು ಪಡೆದಿದೆ. ಈ ಆಡುನುಡಿ ಮತ್ತು ಉಪಭಾಷೆಗಳನ್ನು ಇಂದಿನ ಸಾಹಿತ್ಯದಲ್ಲಿ ಬಳಸುವುದರ ಔಚಿತ್ಯದ ಬಗ್ಗೆ ವಿಭಿನ್ನವಾದ ವಾದಗಳಿವೆ. ಮತ್ತು ಈ ಎಲ್ಲಾ ವಾದಗಳೂ ಯಾವುದು ಅಪ್ಪಟವಾದ ಹಾಗೂ ಪರಿಪೂರ್ಣತೆಯತ್ತ ಸಾಗುವ ಮನೋಭೂಮಿಕೆಯುಳ್ಳ ಸಾಹಿತ್ಯ ಎಂಬ ಮೂಲಭೂತ ಜಿಜ್ಞಾಸೆಯ ಮೂಸೆಯಲ್ಲೇ ರೂಪುಗೊಂಡಿವೆ. ಅರೆಗನ್ನಡ ಭಾಷೆಯು ನಡುಗನ್ನಡವೇ ಆಗಿದ್ದು ನಂತರ ಹೊಸ ಗನ್ನಡವಾಗಿ ಈಗ ಶಿಷ್ಟಕನ್ನಡವಾಗಿದೆ.

ಸಾಹಿತ್ಯವೆಂಬುದು ರಸಾನುಭೂತಿಯ ಸೃಷ್ಟಿ ಮಾತ್ರ ಎಂಬ ರಸನಿಷ್ಠ ದೃಷ್ಟಿಕೋನದ ಸಮರ್ಥಕ ಪ್ರಕಾರ ಆಡುನುಡಿಯ ಬಳಕೆ ತೀರಾ ಅನಗತ್ಯ. ಪದ, ಪದ ಸಮುಚ್ಚಯಗಳು ಹುಟ್ಟಿ, ಬೆಳೆದು, ನಡೆದು ಬಂದ ಗುರುತು ಮತ್ತು ಇತಿಹಾಸಗಳಿರುವ ಭಾಷೆಗೆ ಪರಿಪೂರ್ಣವಾದ ಸ್ವರೂಪವೊಂದು ದೊರಕಿದೆ. ಅದರೊಳಗೆ ಎಲ್ಲಾ ರೀತಿಯ ಪ್ರಯೋಗಗಳು ನಡೆಯಬೇಕಿದ್ದು ಗ್ರಾಹ್ಯತೆ ಮತ್ತು ಸಂವಹನ ಪ್ರಾದೇಶಿಕ ವೈವಿಧ್ಯತೆಯ ಕಾರಣದಿಂದ ಕ್ಲಿಷ್ಟವಾಗಕೂಡದು ಎನ್ನುವ ಈ ವಾದದ ಬೆಂಬಲಿಗರು ಸಾಮಾಜಿಕ, ರಾಜಕೀಯ ಮತ್ತು ಸಾಂಸ್ಕೃತಿಕವಾದ ಒತ್ತಡ, ಸಂಘರ್ಷ ಹಾಗೂ ಒಳಸಂಬಂಧಗಳನ್ನು ನಿರಾಕರಿಸುತ್ತಾ ಪ್ರತಿಯೊಬ್ಬ ಸಾಹಿತಿಯೂ ಸಾಹಿತ್ಯೇತರ ಬದುಕಿನ ಉದ್ವಿಗ್ನತೆಯಿಂದ ಪ್ರೇರಿತರಾದವರು ಎಂಬ ಅಂಶವನ್ನು ಮರೆತು ಇಂದು ಪ್ರಸ್ತುತತೆಯನ್ನು ಕಳಕೊಂಡಿದ್ದಾರೆ.

ಈ ಸಂದರ್ಭದಲ್ಲಿ, ನವೋದಯ ಕಾಲದಿಂದ ತೊಡಗಿ ಇಂದೂ ಕ್ರಿಯಾಶೀಲರಾಗಿರುವ, ಕನ್ನಡ ಕಾದಂಬರಿಗಳ ಆಧಾರಸ್ತಂಭವೆನಿಸಿರುವ ಡಾ. ಶಿವರಾಮ ಕಾರಂತರು- ಮತ್ತು ಆ ಬಗೆಯ ಚಿಂತಕರು - ಸಾಹಿತ್ಯದಲ್ಲಿ ದೇಸೀಯತೆಯನ್ನು ವಿರೋಧಿಸಿ ಕನ್ನಡ ಏಕರೂಪದ್ದಾಗಿರಬೇಕೆಂದು ವಾದಿಸುತ್ತಿರುವುದು ಕುತೂಹಲಕಾರಿಯಾಗಿದೆ. ಆದರೆ ಶ್ರೀ ಕಾರಂತರ ಸೃಜನಶೀಲ ಮಾತ್ರ ಅವರೇ ಘೋಷಿಸಿಕೊಂಡಿರುವ ಈ ಗ್ರಹಿಕೆಯ ಲಕ್ಷ್ಮಣ ರೇಖೆಯನ್ನು ಮೀರಿ ಮೆರೆದಿರುವುದನ್ನು ಅವರ ಬಹುತೇಕ ಕೃತಿಗಳಲ್ಲಿ ನಾವು ನೋಡಬಹುದು. ಅದರಲ್ಲೂ 'ಚೋಮನ ದುಡಿ'ಯಂಥ ಕಾದಂಬರಿಗಳು ಭಾಷೆಯ ಬಳಕೆಯ ದೃಷ್ಟಿಯಿಂದ ಪ್ರಯೋಗದಂತೆ ಗೋಚರಿಸುತ್ತಾ ಪ್ರಾದೇಶಿಕ ಸೂಕ್ಷ್ಮಗಳನ್ನು ಹಿಡಿದಿಡಲಾಗದೆ ವಿಫಲವಾಗಿ, ದಲಿತಲೋಕದ ಅಂತಃಸತ್ವವನ್ನು, ನಂಬಿಕೆಗಳನ್ನು ತೆರೆಯಲಾಗದೆ ಪೇಲವವಾಗುತ್ತವೆ. 'ಚೋಮನ ಮಗನೆ ಚೋಮನ ದುಡಿಯನ್ನು ಹೆಚ್ಚು ಸಮರ್ಥ ರೀತಿಯಲ್ಲಿ ಬರೆಯಬಲ್ಲ' ಎಂಬ ಮಾತಿನ ಹುಟ್ಟು ಇಲ್ಲಡಗಿದೆ. ಈ ಹೇಳಿಕೆಯ ಹಿಂದೆ ಯಜಮಾನ ಸಂಸ್ಕೃತಿಯ ಪ್ರಾಬಲ್ಯದಿಂದಾಗಿ ದೇಸೀಯ ಸಂಸ್ಕೃತಿಗಳ ಅನನ್ಯತೆ ನಾಶವಾಗುವ ಭೀತಿ ಇರುವುದು ಸಹ ಗಮನಾರ್ಹವಾಗಿದೆ. ಮರಾಠಿ ಲೇಖಕ ಶ್ರೀ ಬಾಲಚಂದ್ರ ನೆಯಾಡೆಯವರ ಪ್ರಕಾರ, "ದೇಸಿಯಾದವು ಎರಡು ಸಂಸ್ಕೃತಿಗಳ ಸಂಪರ್ಕದಿಂದ ಹುಟ್ಟುವ ಸನ್ನಿವೇಶದಲ್ಲಿ ಬೆಳೆಯುತ್ತದೆ. "ವಸಾಹತುಸಾಹಿ ಸಂದರ್ಭ ಆಫ್ರಿಕಾದ ದೇಶಗಳಲ್ಲಿ ಇದು ಕಪ್ಪು-ಬಿಳಿ ವರ್ಣಗಳ ಪ್ರಶ್ನೆಯಾದರೆ ನಾಗರೀಕರು ಅತಿ ದೀರ್ಘ ಇತಿಹಾಸವುಳ್ಳ ಜಾತಿ ವ್ಯವಸ್ಥೆ ದಟ್ಟ ಪದರುಗಳುಳ್ಳ ನಮ್ಮಲ್ಲಿ ಇದು ಇನ್ನಷ್ಟು ಹೆಚ್ಚು ಸಂಕೀರ್ಣವಾಗಿದೆ. ಆಧುನಿಕ ಕನ್ನಡದ ಬಹುಮುಖ್ಯ ಬರಹಗಾರ ಶ್ರೀ ದೇವನೂರ ಮಹದೇವ ಅವರ ಮಾತಿನಲ್ಲಿ ಹೇಳುವುದಿದ್ದರೆ.

"ಇಲ್ಲಿ ಸಾಹಿತ್ಯ ಯಾವ ರೀತೀಲಿ ಹರಿದು ಬಂತು ಅನ್ನೋದನ್ನ ಗಮನಿಸಿದರೆ ಇಲ್ಲಿ ಸ್ಥಳೀಯರಿಗೆ ಅರ್ಥವಾಗದ ಗುಟ್ಟನ್ನು ಇರಿಸಿಕೊಂಡೇ ಬಂದಿರೋದನ್ನು ಉದ್ದಕ್ಕೂ ಕಾಣಬಹುದು. ವಚನಯುಗ ಇದಕ್ಕೆ ಹೊರಗು. ಅದಾದ ಮೇಲೆ ಪುನಃ ಅದೇ ಕತೆ ಮನುಜನನ್ನು ಕುಗ್ಗಿಸುವ ಜನ್ಮ, ಕರ್ಮ, ವರ್ಣ ಪರಮಾರ್ಥಿಕ ಸತ್ಯ, ಲೌಕಿಕ ಸತ್ಯ ಇಂಥ ಇಬ್ಬಗೆಯ ಸತ್ಯಗಳನ್ನು ಮನದಾಳದಲ್ಲಿ ಅನೈಚ್ಛಿಕವಾಗಿ ಇಟ್ಟುಕೊಂಡ ಕೃತಿಗಳೆ ಇಲ್ಲಿಹುಟ್ಟಿದವು..... ಇಂದಿಗೂ ಸಹ ಉತ್ತಮ ಸಾಹಿತ್ಯ ಅಂದರೆ ಹೆಣಗಳ ರಾಶಿಯಲ್ಲಿ ಜೀವ ಹುಡುಕುವ ಕೆಲಸ........"

ಇನ್ನೊಂದೆಡೆ ಇವರೇ ಹೇಳಿದ ಮಾತು, 'ಕತೆಯಿದ್ದುದೇ ಈ ಭಾಷೆಯಲ್ಲಿ, ಅದನ್ನೇ ಬರೆದೆ' ಎನ್ನುವುದು ಅತ್ಯಂತ ಗಮನಾರ್ಹವಾಗಿದೆ. ಸಾಹಿತ್ಯದಲ್ಲಿ ಹೊಸತನದ ಮತ್ತು ಜೀವಂತಿಕೆಯ ಅನ್ವೇಶಣೆಯ ಅಗತ್ಯದ ದೃಷ್ಟಿಯಿಂದ ನಮಗೆ ಮುಖ್ಯವಾಗುತ್ತದೆ. ಹಾಗೆಂದೆ, ನಮ್ಮ ಜನಾಂಗದ ಅರೆಗನ್ನಡ ಅನನ್ಯವಾದ ಸಂಸ್ಕೃತಿಯೊಂದನ್ನು ತನ್ನೊಳಗೆ ಒಳಗೊಂಡಿರುತ್ತಾ, ನೂರಾರು ಸಾವಿರಾರು ಇನ್ನೂ ಹೊರ ಜಗತ್ತಿಗೆ ಹೇಳಿರದ ಆದರೆ ಹೇಳಲೇಬೇಕಾದ ಕತೆ ಕಾವ್ಯಗಳನ್ನು ಅವಿತಿಟ್ಟುಕೊಂಡಿರುತ್ತಾ ತೆರೆ ಸರಿಸಬಲ್ಲ ಪ್ರತಿಭೆಗಳಿಗಾಗಿ ಕಾದು ಕುಳಿತಿದೆ.

ಅರೆಗನ್ನಡದ ಪರಿಸರ:

ಕಾರ್ಕಳ ತಾಲೂಕಿನಿಂದ ತೊಡಗಿ ವಿರಾಜಪೇಟೆ ತಾಲೂಕಿನ ತನಕ ನೆಲೆಸಿರುವ ಸುಳ್ಯ ಮಡಿಕೇರಿ ತಾಲೂಕುಗಳಲ್ಲಿ ಮತ್ತು ನೆರೆಯ

ಕೇರಳದ ಕಾಸರಗೋಡು ಜಿಲ್ಲೆಯ ಕೆಲವು ಗ್ರಾಮಗಳಲ್ಲಿ ಸಾಂದ್ರವಾಗಿರುವ ನಮ್ಮ ಗೌಡ ಜನಾಂಗದವರ ಮನೆ ಮಾತು ಅರೆಗನ್ನಡ, ಕೆಲವೆಡೆ ತುಳು ತಾಯ್ನುಡಿಯಾಗಿದ್ದರೂ ಅರೆಗನ್ನಡ ಮಾತ್ರ ನಮ್ಮ ಸಮಾಜದ ಸ್ವಂತ ಸೊತ್ತು. ಮೂಲತಃ ನಮ್ಮದು ಪಿತೃಪ್ರಧಾನವಾದ ಅವಿಭಕ್ತ ಕುಟುಂಬ ವ್ಯವಸ್ಥೆ. ಇಂದು ಈ ಒಕ್ಕುಟುಂಬ ಪದ್ಧತಿ ನಶಿಸುತ್ತಿದೆ; ವೈಯಕ್ತಿಕ ಸ್ವಾತಂತ್ರ್ಯದ ಕಾಳಜಿ ಹೆಚ್ಚುತ್ತಿದೆ. ಜತೆಗೆ, ಯಜಮಾನ ಸಂಸ್ಕೃತಿಯೊಂದಿಗಿನ ಮುಖಾಮುಖಿಯ ಸನ್ನಿವೇಶದಲ್ಲಿ ಕೀಳರಿಮೆಯ ಸ್ವಯಂಕೃತಾಪರಾಧ ಮೆರೆದಿದೆ; ಬ್ರಾಹ್ಮಣ ವೈದಿಕ ಸಂಸ್ಕೃತಿಯ ಆಚಾರ ವಿಚಾರಗಳು ಇಲ್ಲೂ ನುಸುಳಿ ಸಾಕಷ್ಟು ದಾಂದಲೆಯೆಬ್ಬಿಸಿದೆ. ಅತ್ಯಂತ ಮಾನವೀಯವಾದ 'ಕೂಡಿಕೆ'ಯಂಥ ವಿಧವಾ ವಿವಾಹ ವ್ಯವಸ್ಥೆಯನ್ನು ಯಜಮಾನ ಸಂಸ್ಕೃತಿಯ ಅನಿಷ್ಟ ವೈಚಾರಿಕತೆ ಅಳಿಸಿಹಾಕಿ ಹೆಣ್ಣಿನ ಶೋಷಣೆ ಸಾರ್ವತ್ರಿಕವಾಗಿದೆ.

ವಿಜಯನಗರ ಸಾಮ್ರಾಜ್ಯದ ಹಂಪಿಯಿಂದ ಇತ್ತಕ್ಕೆ ಪ್ರಸರಿಸಿದ ಗೌಡ ಕನ್ನಡಿಗರು ತುಳು ನಾಡು-ಕೇರಳಗಳ ಗ್ರಾಮೀಣ ಸತ್ವ ಸೊಗಡುಗಳನ್ನು ಮೈಗೂಡಿಸಿಕೊಂಡು ತಮ್ಮದೇ ಆದ ಸಂಸ್ಕೃತಿಯನ್ನು ರೂಪಿಸಿಕೊಂಡವರು. ಬಿಸು, ಕೆಡ್ಡಾಸ, ಅರ್ಮಾವಾಸ್ಯೆ, ಬಲಿಯೇಂದ್ರ ಪೂಜೆ, ಹೊಸ್ತು, ಕೈಲು ಮುಹೂರ್ತ ಮುಂತಾದ ಹಬ್ಬಗಳನ್ನು ನಾವು ಆಚರಿಸುತ್ತೇವೆ. ಇಲ್ಲಿನ ಭೂತಾರಾಧನೆಯ ವೈಶಿಷ್ಟ್ಯವನ್ನು ಅರಗಿಸಿಕೊಂಡು ನಮ್ಮದೇ ಆದ ಪುರುಷಭೂತ, ಶಿರಾಡಿಭೂತಗಳೊಂದಿಗೆ ಉಳ್ಳಾಗ್ಳು, ಕಲ್ಲುರ್ಟಿ, ಗುಳಿಗ, ಕಲ್ಕುಡ, ವಿಷ್ಣುಮೂರ್ತಿ, ಚಾಮುಂಡಿ, ಭಗವತಿ, ಬೈನಾಡಿ, ಮೂರ್ಲೆಲೆ ಮೊದಲಾದ ಭೂತ, ತೆಯ್ಯಂಗಗಳನ್ನು ಆರಾಧಿಸುತ್ತೇವೆ. ಆದಿಯಲ್ಲಿ ನಾವು ಹೊಂದಿರಬಹುದಾದ ವೈದಿಕ ವಿರೋಧಿ ಶೈವಸಂಬಂಧವನ್ನು ಬಿಂಬಿಸುವ 'ಸಿದ್ಧವೇಷ'ವನ್ನು ಕಟ್ಟಿ ಕುಣಿಯುತ್ತೇವೆ. ಶಾಕ್ತ ಸಂಪರ್ಕದ ಶಕ್ತಿಪೂಜೆ, ಗೋಂದೊಳುಗಳನ್ನು ಸಹ ನಡೆಸುತ್ತೇವೆ, ಕಂಬಳ ಕೋಳಿ, ಅಂಕ, ಗದ್ದೆಗೋರಿ ಓಟ, ಅಡ್ಯಾಣ ಪೆಟ್ಟು, ಅಂಬುಕಾಯಿ, ಬಿಲ್ಲ್‌ಕಾಯಿ ಇತ್ಯಾದಿ ಗ್ರಾಮೀಣ ಮತ್ತು ಧಾರ್ಮಿಕ ಆಟೋಟಗಳು ನಮ್ಮದಾಗಿವೆ. ಶ್ರೀಮಂತ ಅರಣ್ಯ ಸಂಪತ್ತನ್ನು ಒಂದೊಮ್ಮೆ ಪಡೆದಿದ್ದ ನಮ್ಮ ಪರಿಸರದಲ್ಲಿ ಬೇಟೆ ರೋಚಕವಾದ ಕ್ರೀಡೆಯಾಗಿದ್ದ, ಧಾರ್ಮಿಕ ಆಚರಣೆಯಾಗಿದ್ದ, ಬದುಕಿನ ಅಂಗವಾಗಿದ್ದ ನೆನಪುಗಳು ಇನ್ನೂ ಮಾಸಿಲ್ಲ. ಆದರೆ ಕಡವೆ, ಕಾಟಿ, ಕೆಂಪ, ಬರಿಕ್ಕ, ಪಾರೆಂಬೆಕ್ಕು ಸಾರೆಂಬಗಳು ನಲಿದಾಡಿದ ನೆಲವಿಂದು ಬಣಗುಡುತ್ತಿದೆ. ಹೊಟ್ಟೆ, ಮುಚ್ಚ, ಅಣ್ಕು, ಸುರುಳಿ, ಮುಳ್ಳಂದಿ ಪಾಲೆಪೂಗಳು ದಂತಕತೆಗಳಾಗತೊಡಗಿವೆ. ಒಂದೆಡೆ ವಿದೇಶೀಯ ಸಂಸ್ಕೃತಿಯ ವ್ಯಾಮೋಹ ಮತ್ತು ಒತ್ತಡ, ಇನ್ನೊಂದೆಡೆ ಭಾರತೀಯ ಯಜಮಾನ ಸಂಸ್ಕೃತಿಯ ಹಿಡಿತ ಹಾಗೂ ಸನ್ಮೋಹಕ ದಬ್ಬಾಳಿಕೆಗಳು ನಮ್ಮ ಬದುಕು, ನಂಬಿಕೆಗಳನ್ನು ಅಲ್ಲಾಡಿಸಿ ಬಿಟ್ಟಿದೆ. ಅರೆಗನ್ನಡವನ್ನು ಮಾತನಾಡುವುದು ಅರೆಗ ನ್ನಡವನ್ನು ಅದರದ್ದೇ ಆದ ರೂಪ, ಶೈಲಿ, ಉಚ್ಚಾರಗಳೊಂದಿಗೆ ಮಾತನಾಡುವುದು ಇಂದು ನಾಚಿಗೆಯ ಕೀಳರಿಮೆಯ ವಿಚಾರವಾಗಿದೆ! ನಾಲ್ಕು ಸೂತ್ರದ ಮನೆಯ ಕನ್ನಿಕೋಂಬರೆಯಲ್ಲಿ ಕನ್ನಿಕಂಬದ ಮುಂದೆ 'ಗುರು ಕಾರ್ನೂರುಗೆ' ಅಗಲು ಇಕ್ಕಿ ಕೈಮುಗಿದು ಹದಿನಾರು ತಲೆಮಾರುಗಳ ಹಿರಿಯರನ್ನು ನೆನೆದು ಸುಖ ಸಂತೋಷಗಳನ್ನು ಹಂಚಿಕೊಂಡು, ಸಂಕಷ್ಟದ ಸಂದರ್ಭದಲ್ಲಿ 'ಒಂದು ನಿರ್ಧಾರವನ್ನು ತೆಗೆದುಕೊಳ್ಳುವ ವ್ಯವಸ್ಥೆ ಕುಸಿದು ಬಿದ್ದಿದೆ. ಇವೆಲ್ಲವನ್ನೂ ಸಾಹಿತ್ಯ ಮುಖೇನ ದಾಖಲಿಸುವ ಅಗತ್ಯ ನಮ್ಮ ಮುಂದಿದೆ. ಅರೆಗನ್ನಡದ ಭಾಷೆ, ಸಂಸ್ಕೃತಿಗಳ, ಸಾರಸ್ವರೂಪಗಳನ್ನು, ಒಳಿತುಕೆಡುಕುಗಳನ್ನು ಹೊರಜಗತ್ತಿಗೆ ತೆರೆದಿಡುವ ಜವಾಬ್ದಾರಿಯನ್ನು ಇದು ಒಳಗೊಂಡಿದೆ. ಯಾರು ಯಾರಿಗಿಂತಲೂ ಕಡಿಮೆಯಲ್ಲ, ಅಥವಾ ಮಿಗಿಲಿಲ್ಲ, ಆಯಕಟ್ಟಿನಲ್ಲಿ, ಕುಳಿತ ಸಂಸ್ಕೃತಿ ಮಾತ್ರ ಉತ್ಕೃಷ್ಟವಲ್ಲ, ಮಾನವನ ನೋವುನಲಿವುಗಳು ಸಾರ್ವತ್ರಿಕವಾದುದು ಎಂಬುದನ್ನು ಈ ನಮ್ಮ ಭಾಷೆಯನ್ನು ಒಳಗೊಳ್ಳುವ ಸಾಹಿತ್ಯದ ಮೂಲಕ ತೋರಿಸಬೇಕಿದೆ. ಅರೆಗನ್ನಡ ಮೌಖಿಕ ಪರಂಪರೆಯ ಮೂಲಕ ಪಡೆದಿರುವ ಕತೆಗಳು, ಗಾದೆಗಳು ಸಂಗ್ರಹಿಸಲ್ಪಡಬೇಕಾದ ಅನಿವಾರ್ಯತೆಯಿದೆ. ಸಪ್ತಪದಿಯನ್ನು ತುಳಿಯದೆ ಗೌಡ ಧಾರೆಯ ಪದ್ಧತಿಯಲ್ಲಿ ಮದುವೆಯಾಗುವ ಗೌಡ ಕನ್ನಡಿಗನ ಹುಟ್ಟು, ಸೃಷ್ಟಿ, ಸಾವುಗಳ ಸಂದರ್ಭದ ಆಚರಣೆಯ ಹಿಂದಿನ ಚಿಂತನೆಗಳನ್ನು ಕಾರಣಗಳನ್ನು ಇದೀಗ ನಾವು ಅರ್ಥಮಾಡಿಕೊಳ್ಳಬೇಕಿದೆ.

**ಸಾಹಿತ್ಯದಲ್ಲಿನ ಸಾಧ್ಯತೆಗಳು :**

ಅರೆಗನ್ನಡದ ನೆರಳಲ್ಲೇ ಇದ್ದರೂ ಕನ್ನಡ ಲಿಪಿಯ ಮೂಲಕ ಭಾಷೆಯ ಸ್ಪಷ್ಟ ಉಚ್ಚಾರವನ್ನು ಬರೆಯುವುದು ಅಸಾಧ್ಯ. ಕನ್ನಡ ಹೊಂದಿರುವುದಕ್ಕಿಂತ ಹೆಚ್ಚು ಸ್ವರಗಳು ಅರೆಗ ನ್ನಡದಲ್ಲಿ ಇರುವುದರಿಂದ ಇದೊಂದು ತಾಂತ್ರಿಕ ಅಡಚಣೆಯಾಗಿ ಪರಿಣಮಿಸಿದೆ. ಆದುದರಿಂದ ಕೃತಿಯೊಂದನ್ನು ಸಂಪೂರ್ಣವಾಗಿ ಅರೆಗನ್ನಡದಲ್ಲಿ ನಿರೂಪಿಸುವುದು ಸಾಧ್ಯವಾದರೂ ಅದು ಓದುವಿಕೆಗೆ ಒಗ್ಗಲು ಕಷ್ಟವಾಗಬಹುದು. ಹಾಗಿದ್ದು, ಕತೆ ಕಾದಂಬರಿಗಳಲ್ಲಿ ಈ ಭಾಷೆಯ ಪ್ರಾದೇಶಿಕ ವಿವರಗಳನ್ನು ಒಳಗೊಳ್ಳುವ ಪದಗಳನ್ನು, ಸಂಸ್ಕೃತಿಯ ಛಾಪನ್ನು ಪ್ರಚುರಪಡಿಸುವ ನುಡಿಗಟ್ಟುಗಳನ್ನು ಸಂದರ್ಭೋಚಿತವಾಗಿ ತುಂಬಿಕೊಳ್ಳುತ್ತಾ ಅರೆಗನ್ನಡದಲ್ಲೆ ನಿರೂಪಣೆ ಮಾಡಿ ಇಲ್ಲಿನ ವೈಶಿಷ್ಟ್ಯವನ್ನು, ಸೂಕ್ಷ್ಮವನ್ನು ಬಿತ್ತರಗೊಳಿಸುವುದು ಖಂಡಿತವಾಗಿಯೂ ಸಾಧ್ಯ..

ಕಾವ್ಯದ ರಚನೆಯನ್ನು ಸಂಪೂರ್ಣವಾಗಿ ಅರೆಗನ್ನಡದಲ್ಲೇ ಮಾಡಬಹುದು. ಕವನಗಳನ್ನು ಹೊಸೆಯುವ ಗಂಭೀರ ಪ್ರಯತ್ನಗಳು ಇನ್ನೂ ಆಗಬೇಕಿವೆ. ಸುಧಿಸಮಾನಗಳಿಲ್ಲದ ನಮ್ಮ ಭಾಷೆಯನ್ನು ಪಳಗಿಸುವುದು ತ್ರಾಸದಾಯಕವಾದರೂ ಗೇಯತೆಯುಳ್ಳ ಹಾಡುಗಳ ನಿರ್ಮಾಣಕ್ಕೆ ಹೆಚ್ಚಿನ ಅವಕಾಶವಿದೆ.

ಈ ನಿಟ್ಟಿನಲ್ಲಿ ಒಂದಷ್ಟು ಪ್ರಯೋಗಗಳು ನಡೆದಿವೆ. ಶ್ರೀ ಹೊದ್ದಟ್ಟಿ ಭವಾನಿಶಂಕರ್, ಶ್ರೀ ಕೂಡಕಂಡಿರ ಪೊನ್ನಪ್ಪ ಮತ್ತು ಶ್ರೀ ಕುಲ್ಲಚನ ಕಾರ್ಯಪ್ಪ ಅರೆಗನ್ನಡದ ಮೊದಲ ಕವಿಗಳಾಗಿ ಮೂಡಿ

ಬಂದಿದ್ದಾರೆ. ಭವಾನಿ ಶಂಕರ್ ಅವರು 'ಗೌಡರ ಮೊದುವೆ', 'ದಾಪುನ ಗದ್ದೆ ಗೋರಿ', 'ಅಜ್ಜಿ ಸಾಂಕಿದ ಮಂಜ ಆಕಿಲೆ', 'ಚೋಮಣ್ಣನ ಕೋಳಿ ಕಟ್ಟ', 'ಮೊಟಿ ಗೂಡೆನ ಮೊದುವೆ' ಹಾಡುಗಳ ಮೂಲಕ ನಮ್ಮ ಸಮಾಜದ ಅತ್ಯಂತ ಜನಪ್ರಿಯ ಕವಿಯೆನ್ನಬಹುದು. ಪೊನ್ನಪ್ಪರವರ 'ತಾಬೆದಾರಿಕೆ' ಕವನ ಸಮಕಾಲೀನ ಕನ್ನಡ ಸಾಹಿತ್ಯಕ್ಕೆ ಹೋಲಿಸಿದರೂ ಉನ್ನತ ಸ್ಥಾನದಲ್ಲಿ ನಿಲ್ಲುವಂಥ ರಚನೆ.

ಹಾಡುವಿಕೆಯಲ್ಲಾಗಲೀ, ದೃಶ್ಯ ಮಾಧ್ಯಮದ ಅಭಿವ್ಯಕ್ತಿಯಲ್ಲಾಗಲೀ ಲಿಪಿಯ ಕ್ಲಿಷ್ಟತೆಯ ಪ್ರಶ್ನೆ ಉದ್ಭವಿಸದೆ ಇರುವುದರಿಂದ ನಾಟಕಗಳ ಸಾಧ್ಯತೆಗಳು ವಿಪುಲವಾಗಿವೆ. ಶ್ರೀ ಎ. ಕೆ. ಹಿಮಕರ ಅವರ ಅಪೂರ್ವ ಪ್ರಯತ್ನ 'ಪುರುಷ' ರಂಗಕ್ಕೇರಿದಲ್ಲಿ ಅದು ಅರೆಗನ್ನಡದ ಮೊದಲ ನಾಟಕವಾಗಬಹುದು.

ಬೆಂಗಳೂರಿನ 'ಕೊಡಗು ಮತ್ತು ದಕ್ಷಿಣ ಕನ್ನಡ ಗೌಡ ಸಮಾಜ' ಅರೆಗನ್ನಡದ ಬರಹಗಳೇ ಮುಖ್ಯವಾಗಿರುವ ಕೆಲವು ಸ್ಮರಣ ಸಂಚಿಕೆಗಳನ್ನು ಹೊರತಂದಿದೆ. 1985 ರಲ್ಲಿ ಶ್ರೀ ಸೂದನ ಈರಪ್ಪ ಅವರ 'ಗೌಡದೊನಿ' ಪತ್ರಿಕೆ ಅರೆಗನ್ನಡದ ಮೊದಲ ಪತ್ರಿಕೆಯಾದ ಹೆಮ್ಮೆಯೊಂದಿಗೆ ಹೊರಬಂದರೂ ಹೆಚ್ಚು ಕಾಲ ಬಾಳಲಿಲ್ಲ. 1997 ರಿಂದ ಈಚೆಗೆ ಮೈಸೂರಿನಿಂದ 'ಕೊಡಗು ಸಂಗಾತಿ', ಪಟ್ಟಡ ಶೀಲಾಮಣಿಯವರ ಸಂಪಾದಕತ್ವದಲ್ಲಿ ಕನ್ನಡ ಮತ್ತು ಅರೆಗನ್ನಡದಲ್ಲಿ ಪ್ರಕಟವಾಗುತ್ತಿರುವ ಉಪಯುಕ್ತ ಪತ್ರಿಕೆಯಾಗಿದೆ.

ಸಾಹಿತ್ಯದ ಉಳಿದೆಲ್ಲಾ ಪ್ರಕಾರಗಳಲ್ಲಿ ಅರೆಗನ್ನಡದ ಬಳಕೆಯ ಬಗ್ಗೆ ಹೆಚ್ಚು ಹೇಳುವುದು ಉಚಿತವಲ್ಲ; ಅದು ಕೇವಲ ಭಾವುಕತೆಯಾಗಬಹುದಷ್ಟೇ. ಕತೆ, ಕಾದಂಬರಿ, ಕಾವ್ಯ, ನಾಟಕ ಮತ್ತು ಪತ್ರಿಕೋದ್ಯಮ ಇವುಗಳಲ್ಲಿ ಅರೆಗನ್ನಡವನ್ನು ಸಮರ್ಥವಾಗಿ ಉಪಯೋಗಿಸಲು ಸಾಧ್ಯವಾದರೆ ಆ ಯಶಸ್ಸು ಇನ್ನಿತರ ಶಾಖೆಗಳಿಗೂ ವ್ಯಾಪಿಸಬಹುದು. ಅಂತೂ, ಇಲ್ಲಿಯವರೆಗೆ ನಡೆದಿರುವ ಪ್ರಯತ್ನಗಳು ಅತ್ಯಲ್ಪ ವಾಗಿದೆ.

ನೂರಾರು ವರ್ಷಗಳ ಕಾಲ ಅನ್ಯಭಾಷೆಗಳ ಸಂಪರ್ಕವಿಲ್ಲದೆ ವಿಕಾಸಗೊಳ್ಳುವ ಅವಕಾಶದಿಂದ ವಂಚಿತವಾಗಿದ್ದರೂ ತನ್ನತನವನ್ನು ಸ್ವಂತಿಕೆಯನ್ನು ಇಂದಿನತನಕ ಉಳಿಸಿಕೊಂಡಿರುವ ಕನ್ನಡದಂತೆ ಸಂಸ್ಕೃತ ದಾಸ್ಯಕ್ಕೊಳಗಾಗಿ ಭ್ರಷ್ಟವಾಗದ, ಅರೆಗನ್ನಡ ಹಿಂಬೊತ್ತು ಬೆಳ್ಳಾರು ಮುಂತಾದ ಅಪ್ಪಟ ಪದಗಳನ್ನು ತನ್ನೊಳಗೆ ಮಾತ್ರ ಉಳಿಸಿಕೊಂಡಿದ್ದು, ಇನ್ನೂ ಹಲವು ಪರಿಶುದ್ಧ ದ್ರಾವಿಡ ಶಬ್ದಗಳು ಕಿಂಚಿತ್ ಮಾತ್ರ ಬದಲಾವಣೆಯೊಂದಿಗೆ ಈ ನುಡಿಯಲ್ಲಿ ಇಂದೂ ಬಳಕೆಯಲ್ಲಿರುವುದರಿಂದ ಒಟ್ಟು ಕನ್ನಡ ಸಾಹಿತ್ಯದ ದೃಷ್ಟಿಯಿಂದಲೂ ಅರೆಗನ್ನಡ ಸಾಹಿತ್ಯದ ಬೆಳವಣಿಗೆ ಅಗತ್ಯ ಮತ್ತು ಅರ್ಥಪೂರ್ಣವಾಗಬಲ್ಲುದು. ಈ ಮೇಲೆ ಈಗಾಗಲೇ ಹೇಳಿದಂತೆ ಭಾಷೆ ಪ್ರತಿಭೆಗಾಗಿ ಕಾಯುತ್ತಿದೆ. ಈ ಭಾಷೆಯನ್ನು ಈ ಭಾಷೆ ರೂಪಿಸಿರುವ ಬದುಕನ್ನು ಬರಹಗಾರನೊಬ್ಬ ಗುರುತಿಸಿದಲ್ಲಿ ಅವನನ್ನು ಈ ಭಾಷೆಯಿಂದಾಚೆಗಿನ ಭಾಷೆಗಳೂ, ಬದುಕುಗಳೂ ಗುರುತಿಸುವುವು.

ಕೊನೆಯಲ್ಲಿ ಅರೆಗನ್ನಡದ ಒಂದು ಜಾನಪದ ಚಟುಕದೊಂದಿಗೆ ನನ್ನ ಮಾತನ್ನು ನಿಲ್ಲಿಸುತ್ತೇನೆ.... ದಿಬ್ಬಣದ ನಿರೀಕ್ಷೆಯಲ್ಲಿರುವ ಬಂಧು ಸಮೂಹ ಮೊದೋಳಿಗೆಯನ್ನು ಗೇಲಿ ಮಾಡಿ ಖುಷಿಗೊಳಿಸುವ ಸನ್ನಿವೇಶ. ಈ ಪದ್ಯ ಹೊಮ್ಮಿಸುವ ಇತರ ಸಾಂದರ್ಭಿಕ ಅರ್ಥಗಳ ಕಾರಣದಿಂದ ನಮ್ಮ ಭಾಷೆಯನ್ನು ಸಾಂತ್ವನಗೊಳಿಸಲು ನಾನಿಲ್ಲಿ ಅದನ್ನು ಬಳಸುತ್ತಿದ್ದೇನೆ.

ಕೊಟ್ಟ್ ಕತ್ತಿ ಬಾಣೆಲಿ
ಕೊಂಬೋಲಗ ಕೇಳ್ದೆ
ಮರ್ಡ್‌ಬಡ ನೀ ಕುಂಞಕ್ಕ!

ದಬ್ಬಡ್ಕದ ಬಾಣೆಲಿ
ದಿಬ್ಬಣ ಬಂದುಟ್ಟು
ಮರ್ಡ್‌ಬಡ ನೀ ಸಣ್ಣಕ್ಕ!

ಬರಹ : ಶ್ರೀ ವಿದ್ಯಾಧರ ಬಡ್ಡಡ್ಕ, ಅಡ್ವಕೇಟ್ ಮಡಿಕೇರಿ.

## ಪತ್ರೊಡೆ (ಕೆಸನ ಹಿಟ್ಟ್)

ಈಗ ಆಟಿ ತಿಂಗ ಹತ್ರ ಬಾತ್. ಆಟಿ ತಿಂಗ ಹದಿನೆಂಟ್‌ತ್ತೇಳ್‌ಕನ ಆಟಿ ಪಾಯ್ಸ, ಪತ್ರೊಡೆ, ಕೆಸನ ಸಾರ್ ಎಲ್ಲಾ ಗ್ಯಾನ ಆದೆ. ಆಟಿ ಪಾಯ್ಸ ಮಾಡ್ದಂವ ಇಲ್ಲೆ, ಮಾಡ್ಕೆ ಗೊತ್ತಿಲ್ಲದವು ಯಾರು ಇಲ್ಲೆತ ಹೇಳಕ್ಕು. ಕೊಡಗಿನ ಕಡೆ ಮರಗಳ್ಲಿ ಕಲ್ಲ್‌ಗಳ ಮೇಲೆ, ಮರಗಳ ಕಬುರ್‌ಗಳ್ಲಿ ಮರ ಕೆಸ ಹುಟ್ಟಿಕಂಡಿದ್ದದೆ. ಅದನ್ನ ಕೊಯ್ದ್ ತಂದ್ ಲಾಯಿಕ ತೊಳ್ದ್ ಸೊಪ್ಪಿನ ಮಾತ್ರ ಸಣ್ಣಗೆ ಕುಯ್ದು ಇಡಕ್ಕು. ಅಕ್ಕಿನ ನೆನೆಪಾಕಂಡ್, ಕಡ್ದ್, ಅರ್ದ ಸಣ್ಣ ಆದ ಮ್ಯಾಲೆ, ಕೊಯ್ದ್ ಇಟ್ಟ್‌ಕಂಡ್‌ದ್ದ ಸೊಪ್ಪಿನ ಅದರ ಒಟ್ಟಿಗೆ ಹಾಕಂಡ್ ಸಾಧಾರಣ ಸಣ್ಣ ಆಗುವಂಗೆ ಕಡಿಯೊಕ್ಕು. ಅದಿಕ್ಕೆ ಬೇಕಾಗುವಸ್ಟ್ ಉಪ್ಪ್, ಮೆಣ್ಸ್, ಹುಳಿನೀರ್ ಸೇರ್ಸಿ ಲಾಯಕ್ಕ್ ಕಲ್ಸಿಕಂಡ್, ಬಟ್ಲ್‌ಲಿಗೆ ಹಾಕಿ ಇಡಕ್ಕು. ಬಟ್ಲ್‌ಟ್ಟ್ ಮಾಡುವಂಗೆ ಕಳ್ಸಿಸಿಗೇಲಿ ಹಾಕಿ ಒಲೆ ಮ್ಯಾಲೆ ಇಡಕ್ಕು. ಹುಳಿ ಕಮ್ಮಿ ಆದರೆ ಬಾಯಿ ತೊರ್‍ಸುದು. ಅದಿಕ್ಕೆ ಸ್ವಲ್ಪ ಜ್ಯಾಸ್ತಿ ಹಾಕಕ್ಕು.

ಬೆಂದ ಮ್ಯಾಲೆ ಕಳ್ಸಿಗೆಂದ ಬಟ್ಲ್‌ಗಳ್ನ ತೆಗೆಯೋಕು. ತೆಗ್ದ್ ಚಾಕ್ ತಕ್ಕಂಡ್ ಹಿಟ್ಟ್‌ನ ಸಣ್ಣ ಸಣ್ಣ ಬಾಗ ಮಾಡಕ್ಕು. ಮತ್ತೆ ಒಗ್ಗರಣೆ ಹಾಕಿಕೆ ಹಿಂದೆ, ಸಂಬಾರ, ತೆಂಗಿನಕಾಯಿ, ಜೀರಿಗೆ, ಮಸಾಲೆ ಕಡ್ದ್, ಬಾಣೇಲಿಲಿ ಎಣ್ಣೆ ಇಟ್ಟ್‌ಕಂಡ್, ಬೆಳ್ಳುಳ್ಳಿ, ಸಾಸುವೆ, ಅಗ್ರಣೆ ಸೊಪ್ಪು ಹಾಕಿ ಲಾಯ್ಕಕಾದ ಹಿಟ್ಟ್‌ಗೆ ಮಸಾಲೆ ಹಾಕಿ ಕೊದಿಬಂದ ಮ್ಯಾಲೆ ಕೊಯ್ದ್ ಇಟ್ಟ್‌ಕಂಡಿದ್ದ ಹಿಟ್ಟ್‌ನ ಅದರ ಒಳ್ಗೆ ಹಾಕಿ ತಿರುಗಿಸಕ್ಕು. ಸ್ವಲ್ಪ ಗಟ್ಟಿ ಆದ ಮ್ಯಾಲೆ ಇಳ್ಸಿಕಂಡ್ ಸ್ವಲ್ಪ ಚೆಣ್ದ ಮ್ಯಾಲೆ ತಿನ್ನಕ್ಕು. ಇದ್ ಎಸ್ಟ್ ಲಾಯ್ಕತ್ತೇಳಿಕೆ ತಿಂದ ಮ್ಯಾಲೆ ಗೊತ್ತು. ಇನ್ನೊಂದು ಸಲ ಮಾಡ್ನೊತ ಆಸೆ ಆದೆ.

ಆದ್ದರಿಂದ ನಮ್ಮ ಕೊಡಗಿನ ಅಕ್ಕಂದ್‌ರ್ ಎಲ್ಲೆ ಹೋಗಿರಲಿ ತಾವು ಸಹ ಮಾಡಕ್ಕು, ಹಂಗನೆ ತಮ್ಮ ಮಗಕ್ಕಳಿಗೆ ಸೊಸೆಗಳಿಗೆ ಹೇಳಿ ಕೊಟ್ರೇ ನಾವ್ ನಮ್ಮದ್‌ತ್ತೇಳ್ವ ಸಂಸ್ಕೃತಿಗ ಸಂಪ್ರದಾಯಗ ಉಳ್ಕಂಡದೆತ ನನ್ನ ಅಭಿಲಾಷೆ.

- ಕಾಕೇರ ಹರಿಣಿ ಆನಂದ, ಬಿಳಿಗೇರಿ.

# ತಲಕಾವೇರಿಯಲ್ಲಿ ವಿಜಯನಗರ ಕಾಲದ ನಾಣ್ಯ ಪತ್ತೆ

ಇತ್ತೀಚೆಗೆ ಇತಿಹಾಸ ಪ್ರಸಿದ್ಧ ವಿಜಯನಗರ ಕಾಲದ ಹನ್ನೊಂದು ನಾಣ್ಯಗಳೂ ಸೇರಿದಂತೆ ಒಟ್ಟು 50 ತಾಮ್ರ ಮತ್ತು ಒಂದು ಬೆಳ್ಳಿ ಪುರಾತನ ನಾಣ್ಯ ಕೊಡಗಿನ ತಲಕಾವೇರಿಯಲ್ಲಿ ಪತ್ತೆಯಾಗಿದೆ.

ಇದೇ ಮೊದಲಬಾರಿಗೆ ಮಡಿಕೇರಿ ಪ್ರದೇಶದಲ್ಲಿ ವಿಜಯನಗರ ಕಾಲದ ನಾಣ್ಯಗಳು ಪತ್ತೆಯಾಗಿರುವುದು ಕುತೂಹಲಕರವಾಗಿದೆ ಎಂದು ಪ್ರಾಚೀನ ಇತಿಹಾಸ ಮತ್ತು ಪುರಾತತ್ವ ವಿಭಾಗದ ಯುಜಿಸಿ ಬೃಹತ್ ಸಂಶೋಧನಾ ಯೋಜನೆ ಪ್ರಧಾನ ಸಂಶೋಧಕ ಡಾ. ಎನ್. ಎಸ್. ರಂಗರಾಜು ಇತ್ತೀಚೆಗೆ ತಿಳಿಸಿದ್ದಾರೆ. ದೊರೆತಿರುವ ನಾಣ್ಯಗಳಲ್ಲಿ 9 ನಾಣ್ಯಗಳ ಮುಂಭಾಗದಲ್ಲಿ ಆನೆ ಚಿತ್ರಣವಿದೆ. ಒಂದರಲ್ಲಿ ನವಿಲು ಹಾಗೂ ಮತ್ತೊಂದರಲ್ಲಿ ವೀರಾಸನ ದಲ್ಲಿ ಕುಳಿತಿರುವ ಗರುಡ ಚಿತ್ರವಿದ್ದು, ಇದು ದೇವರಾಯನ ಕಾಲದ ನಾಣ್ಯವಾಗಿದೆ ಎಂದು ಪತ್ತೆ ಹಚ್ಚಲಾಗಿದೆ. ಉಳಿದಂತೆ ಮೈಸೂರು ಅರಸರ ಕಾಲದ ಕುರುಹಾಗಿ ಮುಂಭಾಗದಲ್ಲಿ ಆನೆ ಹಾಗೂ ಹಿಂಬದಿಯಲ್ಲಿ ಉರ್ದು ಅಕ್ಷರಗಳಿರುವ ನಾಣ್ಯಗಳು ಮತ್ತು ಕೊಡಗಿನ ಕೆಲವು ರಾಜವಂಶಗಳ ನಾಣ್ಯಗಳಾಗಿವೆ. ಇವುಗಳಲ್ಲಿ ಕೆಲವು ಸವಕಲಾಗಿದೆ ಎಂದು ಪತ್ರಿಕಾ ಹೇಳಿಕೆಯಲ್ಲಿ ತಿಳಿಸಿದ್ದಾರೆ.

ನಾಣ್ಯ ಶಾಸ್ತ್ರದ ವಿಷಯದಲ್ಲಿ ಅತ್ಯಂತ ಕಡಿಮೆ ಮಾಹಿತಿ ಲಭ್ಯವಿರುವ ಸಂದರ್ಭದಲ್ಲಿ ದೊರೆತಿರುವ ಈ ನಾಣ್ಯಗಳು ಕೊಡಗು ಜಿಲ್ಲೆಯ ನಾಣ್ಯ ಶಾಸ್ತ್ರದ ಮೇಲೆ ಹೊಸ ಬೆಳಕನ್ನು ಚೆಲ್ಲಿವೆ ಎಂದು ಹೇಳಿದ್ದಾರೆ.

ತಲಕಾವೇರಿಯಲ್ಲಿ ಮರಗೋಡಿನ ಜಿ. ಎಂ. ಪಿ. ಶಾಲೆ ಅಧ್ಯಾಪಕ ಪಿ. ಎಸ್. ಜನಾರ್ಧನ ಅವರು ಪತ್ತೆ ಹಚ್ಚಿರುವ ಈ ನಾಣ್ಯಗಳು ಬಹುಮುಖ್ಯ ಸಂಶೋಧನಾ ಕಾರ್ಯವಾಗಿದೆಯಲ್ಲದೆ ಸ್ಥಳೀಯ ಇತಿಹಾಸಕ್ಕೆ ಮುಖ್ಯ ಕೊಡುಗೆಯಾಗಿದೆ ಎಂದು ತಿಳಿಸಿದ್ದಾರೆ. ಬೃಹತ್ ಶಿಲಾಯುಗದ ಸಾಂಸ್ಕೃತಿಕ ನೆಲೆಗಳು ಮತ್ತು ಸಮಾಧಿಗಳ ಅನ್ವೇಶಣೆಯಲ್ಲಿ ಬಹಳ ಮುಖ್ಯವಾದ ನೆಲೆಯಾಗಿರುವ ಮಡಿಕೇರಿ ಜಿಲ್ಲೆಯಲ್ಲಿ ಬ್ರಿಟಿಷರ ಕಾಲದಿಂದಲೂ ಸಂಶೋಧನೆ ನಡೆಸಲಾಗುತ್ತಿದೆ. ಇದುವರೆಗೆ ಮಡಿಕೇರಿ ಜಿಲ್ಲೆಯಲ್ಲಿ 110 ಶಾಸನಗಳು ದೊರಕಿದ್ದು ಅವುಗಳ ಅಧ್ಯಯನ ಮಾಡಲಾಗಿದೆ.

ದೊರೆತ ನಾಣ್ಯಗಳನ್ನು ರಾಸಾಯನಿಕವಾಗಿ ಸ್ವಚ್ಛಗೊಳಿಸಿ ಅಧ್ಯಯನ ನಡೆಸಿರುವ ಡಾ. ಎನ್. ಎಸ್. ರಂಗರಾಜು ಮತ್ತು ಪಿ. ಎಸ್. ಜನಾರ್ಧನ್ ಅವರ ಸಂಶೋಧನಾ ಕಾರ್ಯವನ್ನು ದಕ್ಷಿಣ ಭಾರತದ ಪ್ರಸಿದ್ಧ ನಾಣ್ಯಶಾಸ್ತ್ರ ಸಂಸೋಧಕ ಎ. ವಿ. ನರಸಿಂಹಮೂರ್ತಿ ಪ್ರಶಂಸಿದ್ದಾರೆ.

ಮನವಿ: ಯುಜಿಸಿ ಯೋಜನೆಯಡಿಯಲ್ಲಿ ಯೋಜನಾ ಸಹಾಯಕ ಕೆ. ಎಸ್. ಬೆಟ್ಟಪ್ಪ ಅವರ ನೆರವಿನೊಂದಿಗೆ ಈ ಪ್ರದೇಶದ ಪುರಾತತ್ವ, ಐತಿಹಾಸಿಕ ಹಾಗೂ ಜಾನಪದ ಸಂಗತಿ ಕುರಿತು ಹೆಚ್ಚಿನ ಸಂಶೋಧನೆ ಕೈಗೊಂಡಿರುವ ರಂಗರಾಜು ಹಾಗೂ ಜನಾರ್ಧನ ಅವರಿಗೆ ಸಾರ್ವಜನಿಕರು ಸಹಕಾರ ನೀಡಬೇಕೆಂದು ಮನವಿ ಮಾಡಲಾಗಿದೆ.

-ಸಂಗಾತಿ

# ಬಾಲ ಸಂಗಾತಿ ವಿಭಾಗ
# ಕಳೆದ ಸಂಚಿಕೆಂದ - ಜ್ಞಾನ 2

*ಮುಂದುವರ್ದದೆ*

## ಶಾಲೆಲಿ ಹೇಳಿ ಕೊಟ್ಟದ್ದೆಲ್ಲಾ ನಿಜ ಅಲ್ಲ

ಇಂದ್ ದಶಮಲನ ಪದ್ಧತಿ ಲೋಕವ್ಯವಹಾರಲಿ ಉಟ್ಟು. ಈ ಪದ್ಧತಿಲಿ ಒಂದರ್‌ಂದ ಒಂಭತ್ತರವರೆಗೆ ಅಂಕೆಗಳ್ನ ಮತ್ತೆ ಶೂನ್ಯನ (ಸೊನ್ನೆ) ಉಪಯೋಗಿಸಲ್ಪಟ್ಟದೆ. ಸ್ಥಾನ ಪರಿವರ್ತನೆಂದ ಅಂಕೆಗಳ ಬೆಲೆನೂ ಬದ್‌ಲಾದೆ. ಈ ದಶಮಾನ ಪದ್ಧತಿ ಸಾವಿರ ವರ್ಷಗಳಿಗೂ ಹಿಂದೆ ಭಾರತ ದೇಶಲಿ ಪ್ರಚಾರಲಿತ್ತ್.

ಅಂಕೆಗ ಹೆಂಗೆ ಕ್ರಮೇಣ ವಿಸ್ತಾರ ಆತ್‌ತ ಈ ಚಿತ್ರ ತೋರ್ಸಿದೆ.

| | |
|---|---|
| ಬ್ರಾಹ್ಮಿ ಶಿಲಾಲೇಖನದಲ್ಲಿನ ಅಂಕೆಗ (ಕ್ರಿ. ಪೂ. 300) | - = ≡ ¥ γ ε 7 s ? |
| ಗ್ವಾಲಿರ್ ಶಿಲಾ ಲೇಖದಲ್ಲಿನ ಅಂಕೆಗ (ಕ್ರಿ. ಶ. 870) | १ २ 3 ४ 4 c ७ ८ ? 0 |
| ದೇವನಾಗರಿ ಶಿಲಾಲೇಖನ ದಲ್ಲಿನ ಅಂಕೆಗ (ಕ್ರಿ.ಶ.1100) | १२३४ ५ ६ ७ ८ ९ १० |
| ಆಧುನಿಕ ಅಂಕೆಗ | 1 2 3 4 5 6 7 8 9 0 |
| ಸಂಸ್ಕೃತದ ಅಂಕೆಗ | १ २ ३ ४ ५ ६ ७ ८९१० |
| ಕನ್ನಡ ಅಂಕೆಗ | ೧ ೨ ೩ ೪ ೫ ೬ ೭ ೮ ೯ ೦ |

ಒಂಭತ್ತನೆ ಶತಮಾನದವರೆಗೂ ಈ ಅಂಕೆಗಳ ಉಪಯೋಗಿಸಿಕೆ ಅರಬರಿಗೆ ಆಗಲಿ ಯುರೆಪಿಯನ್ನ್‌ರಿಗೆ ಆಗಲಿ ಗೊತ್ತಿತ್ತ್‌ಲೆ. ಅರಬ್ ದೇಶ ಗಣಿತಜ್ಞ ಅಲ್ಪ ವಾರಿಜ್ಮಿ (780-850 ಕ್ರಿ. ಶ) ಮೊಟ್ಟ ಮೊದ್‌ಲ್ ತನ್ನ ಪುಸ್ತಕಲಿ ಈ ಹಿಂದು ಅಂಕೆಗಳ್ನ ಸ್ಥಾನಕ್ಕೆ ಸರಿಯಾಗಿ ಬೆಲೆ ಬದ್‌ಲಾಗುವ ಕ್ರಮನೂ, ಇತರ ಗಣಿತ ಪ್ರಕ್ರೀಯಗಳ್ನೂ ಉಪಯೋಗಿಸಿತ್. ಮತ್ತೆ ಈ ಎಲ್ಲಾ ಅಂಶಗ ಜಗತ್ತಿನ ಎಲ್ಲಾ ಕಡೆಗೂ ಹಬ್ಬಿತ್. ಇದರಿಂದಲೇ ಪಶ್ಚಿಮ ಯೂರೋಪ್‌ಲಿ ಗಣಿತ (ಲೆಕ್ಕ)ದ ವಿಚಾರ ಕ್ರಾಂತಿ ಆರಂಭ ಆತ್. ಯೂರೋಪ್‌ನ ಇತಿಹಾಸಲೆ ಅತಿ ಪ್ರಾಚೀನ ಹಸ್ತಲಿಖಿತ. ಗ್ರಂಥತ್ತೇಳ್ರೆ, Condse Vigilanus. ಇದ್ ಅಲ್ವೆಲ್ಡೊ ಆಶ್ರಮಕ್ಕೆ ಸಂಬಂಧಿಸಿದ್ದಾಗಿದ್ದ್ ಈ ಗ್ರಂಥಲಿ ಹಿಂಗೆ ಬರ್ದ್ದೊಳೊ. "ಗಣಿತದ ಚಿಹ್ನೆಗಳ್ನ ಉಪಯೋಗಿಸ್‌ಕ್ಕನ ಪ್ರಾಚೀನ ಹಿಂದುಗಳ ಬುದ್ಧಿ ತುಂಬಾ ಚುರುಕಾಗಿತ್ತ್" ಮತ್ತೆ ವ್ಯಾಪಕವಾಗಿತ್ತ್ ತೇಳುದನ್ನ ನಾವು ಅವಶ್ಯ ನೆನಪಲಿ ಇಡೋಕು. ಲೆಕ್ಕ ಮಾಡುದರ್ಲಿನೂ, ಭೂಮಿತಿಯಲ್ಲಿನೂ, ಹಂಗೂ ಇತರ ಸ್ವತಂತ್ರ ಶಾಸ್ತ್ರಗಳಲ್ಲಿನೂ ಇತರ ದೇಶಗ ಹಿಂದೂಗಳ್ನ ಅನುಸರಿಸ್ಯೊಳೊ. ಯಾಕೆತ್ತೇಳ್ರೆ ಈ ಎಲ್ಲಾ ವಿಷಯಗಳ್‌ಲಿ ಹಿಂದುಗ ಅಗ್ರಗಣ್ಯರಾಗ್ಯೊಳೊ. ಒಂಭತ್ತು ಅಂಕೆಗಳ ಉಪಯೋಗ, ಅಂಕೆಗಳ ಸ್ಥಾನನ ಅವಲಂಬಿಸಿ ಸಂಖ್ಯೆನ ಬೆಲೆನ ನಿಶ್ಚಯ ಮುಂತಾದ ಅಂಶಗ ಈ ವಿಷಯಲಿ ಪ್ರಮಾಣ ಆಗಿ ಇದ್ದವು, ಆಗ್ಯುಟ್ಟು.

ಮುಂದುವರ್ದದೆ - ಬಿಟ್ಟೀರ ಚೋಂದಮ್ಮ ಶಂಭು.

# ಕುರಾನ್ (ಕುರ್ ಆನ್) ನಲ್ಲಿ ಏನಿದೆ ?

ಕುರಾನಿನಲ್ಲಿ ಏನಿದೆ? ಎಂಬ ಕುತೂಹಲ ನನ್ನನ್ನು ಚಿಕ್ಕಂದಿನಿಂದಲೇ ಕಾಡಿಸುತ್ತಿತ್ತು. ಮಹಮ್ಮದ್ ಪೈಗಂಬರರು ಒಬ್ಬ ಪ್ರವಾದಿ (ದೇವದೂತ) ಅವರು ಮುಸ್ಲಿಮ್ ಧರ್ಮ ಸ್ಥಾಪಕರು. ಅವರು ಧರ್ಮ ಪ್ರಚಾರ ಮಾಡುತ್ತಿದ್ದುದನ್ನು ಅರೇಬಿಯಾದ ಜನರು ಒಪ್ಪದೆ ಅವನೊಬ್ಬ ಮೋಸಗಾರನೆಂದು ಅವನನ್ನು ವಧಿಸಲು ಸಂಚು ಹೂಡಿದಾಗ ಹೇಗೋ ಇದನ್ನರಿತು ಪೈಗಂಬರರು ಮಕ್ಕಾದಿಂದ ಮದೀನಾಕ್ಕೆ ಓಡಿ ಹೋದರು. ಹೀಗೆ ಓಡಿ ಹೋದಾಗ ಹಗಲು ಹೊತ್ತು ಅಡಗಿ ಕುಳಿತಿದ್ದು ರಾತ್ರಿ ನಕ್ಷತ್ರಗಳ ಬೆಳಕಿನಲ್ಲಿ ಪ್ರಯಾಣಿಸುತ್ತಿದ್ದರು. ಇದನ್ನು ಹಿಜ್ರತ್ ಎಂದು ಕರೆಯುತ್ತಾರೆ. ಪೈಗಂಬರರ ನಂತರ ಹಿಜಿರಾ ಶಕೆ ಪ್ರಾರಂಭವಾಯಿತು. ಇಷ್ಟೇ ಕತೆ ಮುಸ್ಲಿಮೇತರರಿಗೆ ತಿಳಿದಿರುವುದು. ಆದರೆ ಮುಸ್ಲಿಮರ ಧಾರ್ಮಿಕ ಗ್ರಂಥವಾದ ಕುರಾನಿನಲ್ಲಿ ಯಾವ ಧರ್ಮಬೋಧನೆ ಇದೆ? ಮುಸ್ಲಿಮರ ಒಗ್ಗಟ್ಟಿನ ಗುಟ್ಟೇನು? ಅವರು ತಪ್ಪದೆ ಹೊತ್ತು ಹೊತ್ತಿಗೆ ನಮಾಜು (ಪ್ರಾರ್ಥನೆ) ಮಾಡುವುದರ ಅರ್ಥವೇನು? ಎಂದು ಮನದಲ್ಲಿ ತರ್ಕಿಸುತ್ತಿದ್ದೆ. ಈ ಬಗ್ಗೆ ಎಷ್ಟೋ ಬಾರಿ ನನ್ನ ಮುಸ್ಲಿಮ್ ಸ್ನೇಹಿತೆಯರನ್ನು ಕೇಳಿದಾಗ ನಾವು ಒಂದೇ ದೇವರನ್ನು (ಅಲ್ಲಾ) ಪೂಜೆ ಮಾಡುತ್ತೇವೆ. ಮೂರ್ತಿ ಪೂಜೆ ಮಾಡುವುದಿಲ್ಲ. ಎಂದಷ್ಟೇ ಉತ್ತರ ಸಿಗುತ್ತಿತ್ತು. ಕಾರಣ, ನಿಜವಾಗಿ ಕುರಾನಿನಲ್ಲಿ ಏನಿದೆ ಎಂಬುದರ ಸ್ಪಷ್ಟ ಕಲ್ಪನೆ ಅವರಿಗೂ ಇರಲಿಲ್ಲ. ಇದಕ್ಕೆ ಕಾರಣ ಕುರಾನ್ ಇರುವುದುಅರೇಬಿಕ್ ಭಾಷೆ ಕಲಿತೆ ಓದಬೇಕು. ಕುರಾನ್ ಕೂಡ ಅತ್ಯಂತ ಪ್ರಾಚೀನ ಧರ್ಮ ಗ್ರಂಥವಾದ ವೇದದಂತೆ (ಸಂಸ್ಕೃತ)ಶ್ಲೋಕ ರೂಪದಲ್ಲಿದ್ದು ಅರ್ಥ ಮಾಡಿಕೊಳ್ಳಲು ತುಂಬಾ ಪಾಂಡಿತ್ಯಸಂಪಾದಿಸಬೇಕು. ಕೆಲವೊಂದು ಅಕ್ಷರಗಳೆಂತು ಬಿಡಿ, ಬಿಡಿಯಾಗಿದ್ದು ಮಂತ್ರಾಕ್ಷರಗಳಂತೆ ತೋರುತ್ತವೆ. ಈ ಬಿಡಿ ಅಕ್ಷರಗಳ ಅರ್ಥ ಅನುವಾದಕರಿಗೂ ತಿಳಿದಿಲ್ಲ. ಇದೀಗ ಇಸ್ಲಾಮಿಸಾಹಿತ್ಯ ಪ್ರಕಾಶನ (ಕರ್ನಾಟಕ) ಇವರು ಕುರಾನನ್ನು ಕನ್ನಡಕ್ಕೆ ಅನುವಾದಿಸಿ, ಕರ್ನಾಟಕದ ಮುಸ್ಲಿಮರಿಗಲ್ಲದೆ, ಅನೇಕ ಜ್ಞಾನದಾಹಿಗಳಿಗೂ ಧರ್ಮ ಜಿಜ್ಞಾಸುಗಳಿಗೂ ನೆರವಾಗಿದ್ದಾರೆ.

ಸಾಮಾನ್ಯವಾಗಿ ಎಲ್ಲಾ ಧರ್ಮಗಳಂತೆ ಮುಸ್ಲಿಮ್ ಧರ್ಮವೂ ಸತ್ಯ, ಅಹಿಂಸೆ, ನಿಷ್ಠೆಯ ತಳಹದಿಯ ಮೇಲೆಯೇ ನಿರ್ಮಾಣಗೊಂಡಿದೆ. ಕುರ್‌ಆನ್‌ನಲ್ಲಿ ಏನಿದೆ? ಎಂದು ತಿಳಿಯುವ ಮೊದಲು ಮುಸ್ಲಿಮ್ ಎಂದರೇನು? ಎಂದು ತಿಳಿದುಕೊಳ್ಳೋಣ.

ಮುಸ್ಲಿಮ್= ಸರ್ವಾತ್ಮನ ಶರಣ (ಒಬ್ಬನೇ ದೇವರಿಗೆ, ಪ್ರರಬ್ರಹ್ಮ ನಿಗೂಢ ಶಕ್ತಿಗೆ)ಶರಣಾದವರು, ನಂಬಿಕೆ ಇಟ್ಟವರು ಎಂದು ಅರ್ಥ.

ಮುಸ್ಲಿಮ್ ಎಂಬುದು ಒಂದು ಜಾತಿ ಅಲ್ಲ. ಹಿಂದೆ ಅರಬ್ ದೇಶದಲ್ಲಿ ಅನೇಕ ಬುಡಕಟ್ಟಿಗೆ (ಗೋತ್ರಕ್ಕೆ) ಸೇರಿದ ಜನಾಂಗದವರಿದ್ದರು. ಅವರೆಲ್ಲಾ ಬಹುದೇವರಾರಾಧಕರೂ, ಮೂರ್ತಿ ಪೂಜಕರೂ ಆಗಿದ್ದರು. ಆಗ ಇದ್ದದ್ದು ಒಂದೇ ಧರ್ಮ. ಎಲ್ಲಾ ಧರ್ಮಗಳಿಗೂ ಮೂಲ ಆಧಾರವಾದಂಥ ಸನಾತನ ಧರ್ಮ. ಕಾಬಾ ಇವರೆಲ್ಲರಿಗೂ ಪವಿತ್ರ ದೇಗುಲವಾಗಿತ್ತು. ಕಾಬಾದಲ್ಲಿ ಸುಮಾರು 360 ವಿಗ್ರಹಗಳಿದ್ದವು. ಮೂರ್ತಿ ಪೂಜೆಯನ್ನು ಖಂಡಿಸುತ್ತಿದ್ದ ಪೈಗಂಬರರು, ಅರಬ್ ತಮ್ಮ ವಶಕ್ಕೆ ಬಂದ ನಂತರ ಈ ವಿಗ್ರಹಗಳನ್ನು ತೆಗೆಸಿದರು. ಪೈಗಂಬರಿಗಿಂತ ಮೊದಲು ಬಂದ ಪ್ರವಾದಿಗಳೂ ಏಕ ದೇವೋಪಾಸನೆ (ನಿರ್ಗುಣ, ನಿರಾಕಾರ ಪರಬ್ರಹ್ಮ)ಯನ್ನು ಭೋದಿಸಿದರು. ಇವರಿಂದ ಬಂದ ಧರ್ಮ ಗ್ರಂಥಗಳು ಕ್ರಮವಾಗಿ ತೌರಾತ್, ಇಂಜೀಲ್, ಸುಹುಫ಼ೆ, ಇಬ್ರಾಹೀಮ್ ಮುಂತಾದವುಗಳು ಕಾಲ ಕ್ರಮೇಣ ಇವುಗಳು ಅನುಕೂಲಕ್ಕೆ ತಕ್ಕಹಾಗೆ ಬದಲಿಸಲ್ಪಟ್ಟು ಮೂಲ ವಿಷಯ ಸ್ಥಾನಪಲ್ಲಟಗೊಂಡಿತು. ಇವರನ್ನು ಕುರಾನಿನಲ್ಲಿ ಗ್ರಂಥದವರೆಂದು ಹೇಳಿದ್ದಾರೆ.

ಹಿಂದಿನ ಅರಬ್ ಜನರು ಬಹಳ ಕ್ರೂರಿಗಳೂ, ಹಿಂಸಾಚಾರಿಗಳೂ ಆಗಿ ಸಾಮಾನ್ಯ ಜನರ ಜೀವನ ಅಸ್ತವ್ಯಸ್ತವಾಗಿತ್ತು. ಅಂತಹ ಸಮಯದಲ್ಲಿ ಮಹಮ್ಮದರ ಅವತಾರವಾಯಿತು. ಇವರು ನಿರ್ಗುಣ, ನಿರಾಕಾರ ಬ್ರಹ್ಮ ವಿದ್ಯೆಯನ್ನು ಮನಗಂಡು ಅದನ್ನು ಜನರಿಗೆ ಬೋಧಿಸತೊಡಗಿದರು. ನಾವು ಯಾವ ಬ್ರಹ್ಮ ಜ್ಞಾನವನ್ನು, ಬ್ರಹ್ಮವಿದ್ಯೆ, ಶ್ರೀ ವಿದ್ಯೆ ಎಂದು ಕರೆಯುತ್ತೇವೆಯೋ ಅದನ್ನೇ ಪೈಗಂಬರರು ಕುರಾನಿನಲ್ಲಿ ತಿಳಿಸಿದ್ದಾರೆ. ಪೈಗಂಬರರು ಅಕ್ಷರ ಬಲ್ಲವರಾಗಿರಲಿಲ್ಲ. ಅವರಿಗೆ ಬ್ರಹ್ಮ ಜ್ಞಾನ ಲಭಿಸಿದ್ದು ಪೂರ್ವ ಜನ್ಮದ ಪುಣ್ಯವೇ ಸರಿ. "ಯದಾ ಹುದಾಹಿ ಧರ್ಮಸ್ಯ ಗ್ಲ್ಯಾನಿರ್ಭವತಿ ಭಾರತ ಧರ್ಮ ಸಂಸ್ಥಾಪನಾರ್ಥಾಯ ಸಂಭವಾನಿ ಯುಗೇ ಯುಗೇ" ಎಂದು ಕೃಷ್ಣನು ಭಗವದ್ಗೀತೆಯಲ್ಲಿ ಬೋಧಿಸಿದಂತೆಯೇ ಅಂದಿನ ಅರಬ್. ಜನರನ್ನು (ಯವನರನ್ನು) ಸುಧಾರಿಸಲು ಮಹಮ್ಮದರ ರೂಪದಲ್ಲಿ ಭಗವಂತನೆ ಅವತರಿಸಿದ್ದಾನೆ ಎಂಬುದರಲ್ಲಿ ಸಂಶಯವಿಲ್ಲ. ಹೆಚ್ಚೂ ಕಡಿಮೆ ಅದೇ ಸಮಯದಲ್ಲಿ ಭಾರತದಲ್ಲೂ ಅಧರ್ಮಿಗಳೂ ವೇದವಿದ ವೈದಿಕ ಧರ್ಮವನ್ನು ಅಲ್ಲಗೆಳೆಯುತ್ತಾ ಮೆರೆಯುತ್ತಿದ್ದಾಗ ಶಂಕರ ಭಗವತ್ಪಾದರ ಅವತಾರವಾಯಿತು. ಅವರೂ ಕೂಡ ನಿರ್ಗುಣ ಬ್ರಹ್ಮನನ್ನೇ (ಒಬ್ಬನೇ ದೇವರು ಅದ್ವೈತ) ಅರಾಧಿಸುವಂತೆ ತಮ್ಮ ಅದ್ವೈತ ಧರ್ಮದಲ್ಲಿ ಪ್ರತಿಪಾದಿಸಿದ್ದಾರೆ. ಇವರ ಅಧ್ವೈತ ವೇದಾಂತವು "ಸೂಫಿ" ಎಂಬ ಮುಸ್ಲಿಂ ಪಂಥದವರ ಮೇಲೆ ಗಾಢವಾದ ಪ್ರಭಾವ ಬೀರಿತ್ತು. ಅನ-ಅಲ್-ಹಕ್ (ಅಹಂ ಬ್ರಹ್ಮಾಸ್ಮಿ) ಎಂದು ಒಬ್ಬ ವಿಖ್ಯಾತ ಸೂಫಿಯ ಘೋಷಿಸಿದ್ದಾನೆ. ಸಮಾದಿ ಸ್ಥಿತಿಯನ್ನು "ಫನಾ" ಎಂದು ಹೇಳಿದ್ದಾನೆ. ಅದ್ವೈತಕ್ಕೆ ಟವ್ ಹೀದ್ ಎಂದು ಪರ್ಯಾಯ ಪದ. ಬಹುಶಃ ಅದೇ ಸಮಯದಲ್ಲಿ ಪೈಗಂಬರರ ಬೋಧನೆಯು ಮಾತೃಭಾಷೆಯಲ್ಲಿದ್ದ ಕಾರಣ ಬೇಗ ಗ್ರಹಿಸಿದ ಅರಬರು ಮುಸ್ಲಿಮರಾದರು. ಏನೇ ಆದರೂ ಇವೆರಡರ ಸಾರಾಂಶ ಒಂದೇ ಆಗಿದೆ.

ಮಹಾ ಭಾರತದಲ್ಲಿ ಇಲ್ಲದ್ದು ಎಲ್ಲಿಯೂ ಇಲ್ಲ. ಪಂಚಮವೇದ ಎಂಬ ಹೆಗ್ಗಳಿಕೆ ಇದಕ್ಕಿದೆ. ನಿರ್ಗುಣ, ನಿರಾಕಾರ, ಪರತತ್ವವನ್ನೊಳಗೊಂಡ ಪರಬ್ರಹ್ಮನ ವರ್ಣನೆ ಮಾಡಿರುವ ಭಗವದ್ಗೀತೆಯು ಮಹಾಭಾರತದ ಒಂದು ಅಂಗವಾಗಿರುವುದೆ ಇದಕ್ಕೆ ಕಾರಣ. ಕುರಾನಿನಲ್ಲೂ ಇದೇ ನಿರ್ಗುಣ ಬ್ರಹ್ಮನನ್ನೇ ಉಪಾಸಿಸುವಂತೆ ಹೇಳಿದೆ. ಇವರ ಧರ್ಮ ಬೋಧನೆಯಲ್ಲಿ ಯಾರು ನಂಬಿಕೆ ಇಟ್ಟರೋ ಅವರನ್ನು ಅರೆಬಿಕ್ ಭಾಷೆಯಲ್ಲಿ ಮುಸ್ಲಿಮರೆಂದು, (ನಂಬಿದವರು) ನಂಬಿಕೆ ಇಡದವರನ್ನು ಮುಶ್ರಿಕ್

ಎಂದೂ (ನಂಬದವರು) ಯಾರೂ ಇವರ ವಾದವನ್ನು ಅಲ್ಲಗೆಳೆಯುತ್ತಿದ್ದರೊ, ನಿಂದಿಸುತ್ತಿದ್ದರೂ ಅವರನ್ನು ಕುಫ್ರೆ ಅಥವಾ ಕಾಫಿರ್= (ಸತ್ಯ ನಿಷೇಧಕ) ಸತ್ಯವನ್ನು ನಿಷೇದಿಸುವವರು ಎಂದು ಕರೆಯುತ್ತಾರೆ. ಕುರಾನ್ ಓದುವಾಗ ಒಮ್ಮೊಮ್ಮೆ ಬೈಬಲ್ ಓದುತ್ತಿದ್ದೇನೆ ಎಂಬ ಸಂಶಯ ಬರುತ್ತಿತ್ತು. ಕೆಲವು ಹೆಸರುಗಳು ಬೈಬಲ್‌ನಂತೆಯೆ ಸ್ವಲ್ಪ ಬದಲಾಗಿ (ಇಬ್ರಹೀಂ -ಅಬ್ರಹಾಂ) ತೋರುತ್ತವೆ. ಕುರಾನ್‌ಗೂ ಬೈಬಲ್‌ಗೂ ನಿಕಟ ಸಂಬಂಧವಿದ್ದಂತೆ ಕಂಡು ಬಂದರೂ ಸೂಕ್ಷ್ಮ ಪರಿಶೀಲನೆ ಮಾಡಿದರೆ ಇದು ಅದಕ್ಕಿಂತ ಭಿನ್ನವಾಗಿದೆ.

ಭಗವದ್ಗೀತೆ ಮತ್ತು ಮನುಸ್ಮೃತಿ ಇವೆರಡನ್ನು ಕೂಡಿಸಿದರೆ ಕುರಾನ್ ಸಿದ್ಧವಾಗುತ್ತದೆ. ಆದರೆ ಇವುಗಳಲ್ಲಿ ಸ್ವಲ್ಪ ವ್ಯತ್ಯಾಸ ಎಂದರೆ ಭಗವದ್ಗೀತೆಯಲ್ಲಿ ಪ್ರೀತಿಯ ಮಹಾಪೂರ ಅಮೃತಧಾರೆಯಂತೆ ಹರಿದಿದೆ. ಕುರಾನಿನಲ್ಲಾದರೋ ಒಂದೊಂದು ವಾಕ್ಯದ ಕೊನೆಯಲ್ಲೂ ದೇವರ ಮೇಲೆ ಭಯವಿಡಿ ಅವನು ಎಲ್ಲವನ್ನೂ ನೋಡುತ್ತಾನೆ ಎಂದೂ, ಅಖಿರತ್-ಕೊನೆದಿನ (ಸಾಯುವ ಸಮಯ ಅಥವ ಪ್ರಳಯ)ಕ್ಕೆ ಭಯ ಪಡಿ ಎಂದು ದೇವರ ಭಯವನ್ನೇ ಹೆಚ್ಚಾಗಿಸಿದ್ದಾರೆ. ಕುರಾನ್ ಓದಿದ ಜನರು ಬಹಳ ಬೇಗ ಈ ಕಾರಣಕ್ಕಾಗಿಯೇ ಏಕ ದೇವೋ ಪಾಸನೆಗೆ ಶರಣಾದರು. ಅಂದಿನ ಕಾಲದ ಅರಬರನ್ನು ಹತೋಟಿಗೆ ತರಲು ಪೈಗಂಬರರು ಅಥವಾ ಅವರ ಅನುಯಾಯಿಗಳು (ಯಾರು ಕುರಾನನ್ನು ಬರೆದರೋ ಅವರು) ಈ ರೀತಿ ಅಡಿಗಡಿಗೆ ದೇವರ ಭಯ ಪಡಿಸಿದ್ದಾರೆಂದು ತೋರುತ್ತದೆ. ಇದರಿಂದಲೇ ಮುಸ್ಲಿಮರು ತಪ್ಪದೆ ಹೊತ್ತು ಹೊತ್ತಿಗೆ ನಮಾಜು ಮಾಡುತ್ತಿರಬಹುದು. ಉಪನಯನ (ಬ್ರಹ್ಮೋಪದೇಶ) ವಾದ ಬ್ರಾಹ್ಮಣರೂ ಇದೆ ರೀತಿ ಹೊತ್ತು ಹೊತ್ತಿಗೆ ಸಂಧ್ಯಾವಂದನೆ (ಪ್ರಾತ ಸಂಧ್ಯೆ, ಅಹ್ನೀಕ (ಮಧ್ಯಾಹ್ನ) ಸಾಯಂ ಸಂಧ್ಯೆ) ಮಾಡಬೇಕೆಂದು ವಿಧಿ ಇದೆ. ಆದರೆ ಎಷ್ಟು ಜನರು ಈ ಕ್ರಮವನ್ನು ಪಾಲಿಸುವರೋ ತಿಳಿಯದು ಬಹುಶ ಮುಸ್ಲಿಮರಂತೆ ಭಯ ಪಡಿಸಿದ್ದರೆ ಇವರೂ ತಪ್ಪುತ್ತಿರಲಿಲ್ಲ.

ದೇವರು ಕರುಣಾಮಯಿ ಎಲ್ಲರನ್ನೂ ಎಲ್ಲವನ್ನೂ ಕ್ಷಮಿಸುತ್ತಾನೆ ಎಂದು ಹೇಳಿದ ಕುರಾನಿನಲ್ಲಿ ನಂಬದವರನ್ನು ಅನ್ಯ ಧರ್ಮಿಯರನ್ನು ಕೊನೆ ದಿನ ಕಠಿಣ ಶಿಕ್ಷೆಗೆ ಗುರಿಪಡಿಸುತ್ತಾನೆ ಎಂದು ಹೇಳಿದೆ. ಏನೇ ಇರಲಿ ಇದು ಬ್ರಹ್ಮ ವಿದ್ಯೆಯನ್ನು (ಕಠಿಣ ರೀತಿ) ಭೋಧಿಸಿರುವ ಮಹಾನ್ ಗ್ರಂಥವೇ ಸರಿ.

### ಕೆಲವು ಶಬ್ಧಾರ್ಥಗಳು :

ಅಖೀರತ್-ಅಂತಿಮ ದಿವಸ. ಮುಸ್ಲಿಮ್- ಒಬ್ಬನೇ ದೇವರಿಗೆ ಶರಣಾದವರು. ಸಬ್ತ್-(ಸಬ್ಬಾತ್)ಶನಿವಾರ ದಿನ ವಿರಾಮ. ಕೆಲಸ ಕಾರ್ಯ ವರ್ಜ್ಯ. ಬಯ್ತುಲ್. ಮಕ್ದೀಸ್ - ಜರೋಸಲೆಮ್‌ನಲ್ಲಿರುವ ಮಂದಿರ. ಹಿಂದೆ ಮುಸ್ಲಿಮರು ಈ ಕಡೆಗೆ ಮುಖ ಮಾಡಿ ನಮಾಜು ಮಾಡುತ್ತಿದ್ದರು. ನಂತರ ಅವರಿಗೆ ಬಂದ ದೈವಾಜ್ಞೆಯ ಪ್ರಕಾರ, ಕಾಬಾದ ಕಡೆಗೆ ಮುಖ ಮಾಡುವರು. **ಕುಫ್ರೆ-ಕಾಫಿರ್**=ಸತ್ಯ ನಿಷೇಧಕ. ಮಲಕ್-ದೈವಿಕ ಗ್ರಂಥ. ಹಲಾಲ್-ಧರ್ಮಬದ್ಧ (ಶುದ್ಧ ಪಡಿಸಿದ, ದೇವರಿಗೆ ಅರ್ಪಿಸಿದ ನೈವೇದ್ಯ) **ಮುಶ್ರಿಕ್**-ನಂಬಿಕೆ ಇಡದವರು (ಬಹುದೇವರಾರಾಧಕರು, ದ್ವೈತ) **ಇಬಾದತ್**= ಅರಾಧನೆ. ಉಪಾಸನೆ. ಇಲಾಹ- ದೇವ. ಮಲಕ್‌ಗಳು -ದೇವ ದೂತರು. ಕುರಾನ್ -ಓದು ಎಂದು ಅರ್ಥ, ಕಿಯಾಮತ್-ಪುನರುತ್ಥಾನ, ಕುರಾನಿನಲ್ಲಿ ಪುನರುತ್ಥಾನ, ಎಂದರೆ ಪ್ರಳಯದ ನಂತರ ಸೃಷ್ಟಿಯ ಪುನರ್ರಚನೆ. ತಯಮ್ಮುಮ್-ಮೀಯಲು (ಸ್ಥಾನಕ್ಕೆ) ನೀರು ಸಿಗದಿದ್ದಾಗ ಶುದ್ಧವಾದ ಮಣ್ಣಿಗೆ ಎರಡೂ ಕೈ ಹೊಡೆದು ಮುಖ ಕೈ ಕಾಲುಗಳಿಗೆ ಒರೆಸಿಕೊಂಡು ನಮಾಜು ಮಾಡುವ ಕ್ರಿಯೆ. ( ಮತ್ತು ದಿನಾಂಕ ತಾರಿಖ್- ನಕ್ಷತ್ರ (ಗಮನಿಸಿ ಅರೆಗನ್ನಡದಲ್ಲಿ ತಾರಿಖ್ ಎಂದರೆ ನಕ್ಷತ್ರ. ಕನ್ನಡದಲ್ಲಿ ತಾರೆ) ಹಾಗೆಯೇ ಅಖಿಖತ್= ಕೊನೆ ದಿವಸ, ಅರೆ ಗನ್ನಡ ಭಾಷೆಯಲ್ಲಿ ಆಖಿರಿ ಅಥವಾ ಆಖೈರಿ ಎಂದರೆ ಕೊನೆ ಎಂದರ್ಥ ಇದೆ. ತಾರಿಕ್‌ಗೆ ಅರೆಭಾಷೆಯಲ್ಲಿ ದಿವಾಂಕವೆಂದೂ ಅರ್ಥವಿದೆ. ಪ್ರಪಂಚ ದೊಡ್ಡದು ವಿಶಾಲವಾಗಿದೆ.

- ಬಿಟ್ಟೀರ ಚೋಂದಮ್ಮ ಶಂಭು.

---

## ಮನೆಯಂಗಳದಲ್ಲಿ ಸಹ ಬೆಳೆಸಬಹುದಾದ "ಸೀತೆ" ಹೂ

ಮಲೆನಾಡಿನ ಆರೂ ಜಿಲ್ಲೆಗಳ ಗುಡ್ಡ ಬೆಟ್ಟಗಳ ಗಿಡ ಮರಗಳಲ್ಲಿ ಈಗ ಸೀತೆ ದಂಡೆ ಅರಳುವ ಸಮಯ. ಹುಡುಗರು ಅದನ್ನು ಕೀಳಲೆಂದು ಮರ ಹತ್ತಿ ಸರ್ಕಸ್ ಮಾಡುವ ಸಮಯ.

ಮೋಹಕ ಪರಿಮಳ ಬೀರುವ ಇಂಥ ಸುಂದರ ಹೂಗಳು ಎಲ್ಲೋ ಕಾಡಿನ ಮರದ ಮೇಲೆ ಅರಳುವ ಬದಲು ನಮ್ಮ ಮನೆಯ ಅಂಗಳದಲ್ಲೇ ಅರಳಿದರೆ ಎಷ್ಟು ಚೆನ್ನ ಅಲ್ಲವೇ,

ಈಗೀಗ "ಆರ್ಕಿಡ್" ಸಸ್ಯಗಳ ಹೈಬ್ರಿಡ್ ತಳಿ ಸೃಷ್ಟಿಸುವಲ್ಲಿ ವಿಜ್ಞಾನಿಗಳು ಯಶ ಗಳಿಸಿದ್ದಾರಾದರೂ ಇಲ್ಲಿ ಕಾಣುವುದು ಅಪ್ಪಟ ದೇಸೀ ಹೂ.

ಕೊಡಗಿನ ಘಟ್ಟ ಪ್ರದೇಶಗಳ ಮರಗಳ ರೆಂಬೆಗಳ ಮಧ್ಯದಲ್ಲಿ ಹೆಚ್ಚಾಗಿ ಹುಲುಸಾಗಿ ಬೆಳೆಯುವ ಈ ಸಸ್ಯ ನೋಡಲು ಬಹು ಸುಂದರ, ಗೊಂಚಲಾಗಿ ಬಿಳಿಯ ಬಣ್ಣದ ಹೂಗಳು ಸುಮಾರು ಒಂದು, ಒಂದೂವರೆ ಅಡಿಗಳ ಉದ್ದ ಬೆಳೆದಿರುವ ನಿದರ್ಶನಗಳಿವೆ. ಇವುಗಳ ಪರಿಮಳಕ್ಕೆ ಜೇನು ಹುಳುಗಳು ಸಹ ಮುತ್ತಿಕ್ಕುತ್ತವೆ.ಮರಗಳ ಮೇಲೆ ಪರಾವಲಂಬಿಯಾಗಿ ಬೆಳೆಯುವ ಇಂಥ ಆರ್ಕಿಡ್ ಸಸ್ಯಗಳಿಗೆ "ಎಪಿಫೈಟಿಸ್" ಎನ್ನುತ್ತಾರೆ. ಅಂದರೆ ಅಂತರಿಕ್ಷದಲ್ಲಿ ಬೇರುಗಳನ್ನು ಬೆಳೆಸುವ ಸಸ್ಯ ಅಂತ. ಮರದ ಕಾಂಡವನ್ನು ಗಟ್ಟಿಯಾಗಿ ತಬ್ಬಿಕೊಳ್ಳುತ್ತ ಇವುಗಳ ಬೇರುಗಳು ಸಸ್ಯಕ್ಕೆ ಬೇಕಾದ ತೇವ ಮತ್ತು ಪೋಷಕಾಂಶವನ್ನು ಗಾಳಿ ಮಳೆಯಿಂದಲೇ ಪಡೆಯುತ್ತವೆ. ಕೆಲವು ಆರ್ಕಿಡ್‌ಗಳು ಮಳೆ ನೀರನ್ನು, ಒಣ ಎಲೆಗಳನ್ನು,ಹಕ್ಕಿಗಳ ವಿಸರ್ಜನೆಯನ್ನು ಹಿಡಿದಿಟ್ಟುಕೊಳ್ಳಬಲ್ಲ ವಿಲಕ್ಷಣ ವ್ಯವಸ್ಥೆ ಮಾಡಿಕೊಂಡಿರುತ್ತವೆ. ಸೀತೆ ಸಸ್ಯ ಅಥವಾ ಅದರದೇ ದಾಯಾದಿಯಾದ ಚಿಕ್ಕ ದಂಡೆಗಳ "ದ್ರೌಪದಿ" ಸಸ್ಯಕ್ಕೆ ಅಂಥ ವ್ಯವಸ್ಥೆಯೇನಿಲ್ಲ. ಅಕಸ್ಮಾತ್ ನಿರ್ಜೀವ ಕೊಂಬೆಯ ಮೇಲೆ ಬೆಳೆದಿದ್ದರೆ ಅದರ ಪೋಷಕಾಂಶವನ್ನು ಹೀರಿಕೊಂಡು ಸಮೃದ್ಧವಾಗಿ ಬೆಳೆಯಬಹುದು. ಆದರೆ ಹಾಗೆ ಸಮೃದ್ಧ ಬೆಳೆದ ಸಸ್ಯ ಸ್ವಲ್ಪ ಕಾಲದಲ್ಲೇ ಆಧಾರ ತಪ್ಪಿ ಬೀಳುತ್ತದೆ. ಹಾಗಾಗಿ ನಾವು ಅತಿ ಸಮೃದ್ಧ ಸೀತೆ ದಂಡೆಗಳನ್ನು ನಿಸರ್ಗದಲ್ಲಿ ಕಾಣಲಾರೆವು.

ಮನೆಯ ಸಮೀಪ ಅಂತರಿಕ್ಷದಲ್ಲಿ ಸೂಕ್ತ ತೇವಾಂಶ, ಪೋಷಕಾಂಶ ಸಿಗುವಂತೆ ಬೆಳೆಸಿದರೆ ಇಂಥ ಸಮೃದ್ಧ ಹೂ ಫಸಲು ನಮ್ಮದಾಗುತ್ತದೆ.

-ಸಂಗಾತಿ

---

ಜ್ಯೋತಿ ಇಲ್ಲದ ಮನೆಯು ರೀತಿ ಇಲ್ಲದ ಸತಿಯು

## 2 ನೇ ವರ್ಷದ ಪುಣ್ಯ ಸ್ಮರಣೆ



ದಿ। ಕುಂಜಿಲನ ದೇವಯ್ಯ
ಮರಣ : 28-6-2000

ನೀವು ನಮ್ಮೆಲ್ಲರನ್ನು ಅಗಲಿ 2 ವರ್ಷ ಕಳೆಯಿತು, ಭಗವಂತನು ನಿಮ್ಮ ದಿವ್ಯಾತ್ಮಕ್ಕೆ ಚಿರಶಾಂತಿಯನ್ನು ನೀಡಲೆಂದು ಅನುದಿನವು ಪ್ರಾರ್ಥಿಸುತ್ತಾ, ಸದಾ ನಿಮ್ಮನ್ನು ನೆನಪಿನಲ್ಲಿರಿಸಿ ಕೊಂಡಿರುವ :

ಪತ್ನಿ: ದೇವಮ್ಮ, ಮಕ್ಕಳು
ಅಳಿಯಂದಿರು, ಸೊಸೆಯಂದಿರು ಮತ್ತು ಮೊಮ್ಮಕ್ಕಳು.

ಪ್ರಕಟಣೆ : ಕುಂಜಿಲನ ರಮೇಶ, 979, 6ನೇ 'ಎ', ಮುಖ್ಯ ರಸ್ತೆ, ಹೆಚ್. ಎಂ. ಟಿ. ಲೇಔಟ್, ಆರ್. ಟಿ. ನಗರ, ಬೆಂಗಳೂರು -32, Ph: 080/3634001

## ಪ್ರಥಮ ವರ್ಷದ ಪುಣ್ಯಸ್ಮರಣೆ



ದಿ। ಬಾರಿಕೆ ಪೂಣಚ್ಚ
ಜನನ : 6-6-1935
ಮರಣ : 9-7-2001

ನೀವು ಈ ಭೌತಿಕ ಪ್ರಪಂಚವನ್ನು ತ್ಯಜಿಸಿ ಒಂದು ವರುಷ ಕಳೆಯಿತು. ನಿಮ್ಮ ಪ್ರೀತಿ, ವಾತ್ಸಲ್ಯ, ಸ್ನೇಹಮಯ, ಸಹಬಾಳ್ವೆಯ ಚಿರನೆನಪು ಆಗಿಂದಾಗ್ಗೆ ಮರುಕಳಿಸುತ್ತಿದ್ದು, ನಿಮ್ಮ ಆತ್ಮಕ್ಕೆ ಚಿರಶಾಂತಿಯನ್ನು ಆ ಭಗವಂತನು ಅನುದಿನವು ನೀಡಲೆಂದು ಪ್ರಾರ್ಥಿಸುತ್ತಿರುವೆವು.

ಪತ್ನಿ: ಬಿ. ಪಿ. ಮೀನಾಕ್ಷಿ ಪೂಣಚ್ಚ
ಮಗ :ದಿನೇಶ್ ಕುಮಾರ್
ಮಗಳು :ಲತ
ಸೊಸೆ :ಕೀರ್ತಿ, ಅಳಿಯ : ಪ್ರಸನ್ನ, ಮೊಮ್ಮಕ್ಕಳು ಪ್ರಜ್ವಲ್, ಸ್ಪಂದನ, ಮಹೇಶ್ ಗಣಪತಿ ಹಾಗೂ ಅಪಾರ ಬಂಧು ಬಳಗದವರು. ಮಡಿಕೇರಿ. Ph: 229219

## 3 ನೇ ವರ್ಷದ ಚಿರ ಸ್ಮರಣೆ

ದಿ। ಅಂಚೆಮನೆ ಚಿಣ್ಣಮ್ಮ
ಅಭ್ಯತ್ ಮಂಗಲ



ಮರಣ : 27-6-1999

ನೀವು ನಮ್ಮನ್ನಗಲಿ 3 ವರ್ಷ ಕಳೆದರೂ ನಿಮ್ಮ ಸವಿ ನೆನಪು ಆಗಿಂದಾಗ್ಗೆ ಮರುಕಳಿಸುತ್ತಿದೆ. ನಿಮ್ಮ ಗುಣ, ಪ್ರೀತಿ, ವಾತ್ಸಲ್ಯ, ತ್ಯಾಗದ ಆದರ್ಶ ಜೀವನ ನಮಗೆ ಅನುದಿನವು ಮಾರ್ಗದರ್ಶನವಾಗಿದೆ. ನಿಮ್ಮ ನಿಷ್ಕಲ್ಮಶ ದಿವ್ಯಾತ್ಮಕ್ಕೆ ಆ ಭಗವಂತನು ಚಿರಶಾಂತಿಯನ್ನು ನೀಡಲೆಂದು ಅನುದಿನವು ನಾವು ಪ್ರಾರ್ಥಿಸುವೆವು.

ಮಕ್ಕಳು, ಮೊಮ್ಮಕ್ಕಳು, ಅಳಿಯಂದಿರು, ಸೊಸೆಯಂದಿರೂ, ಹಾಗೂ ಅಪಾರ ಬಂಧು ಬಳಗದವರು.

ಪ್ರಕಟಣೆ : ಅಂಚೆಮನೆ ಗಣೇಶ, ಮೈಸೂರು.
Ph: 0821/496246

## 2ನೇ ವರ್ಷದ ಚಿರ ಸ್ಮರಣೆ

ದಿ। ಕೋಳುಮುಡಿಯನ
ಟಿ. ರಾಮಯ್ಯ



ಜನನ : 31-10-1929
ಮರಣ : 27-6-2000

ನೀವು ನಮ್ಮನ್ನಗಲಿ 2 ವರ್ಷ ಕಳೆದರೂ ನಿಮ್ಮ ಸವಿ ನೆನಪು ಸದಾ ನಮ್ಮಲ್ಲಿ ಮರುಕಳಿಸುತ್ತಿದೆ. ನೀವು ಹಾಕಿ ಕೊಟ್ಟ ದಾರಿಯಲ್ಲಿಯೆ ನಾವುಗಳು ಮಕ್ಕಳು, ಮರಿ ಮಕ್ಕಳು ಮುಂದುವರಿಯುತ್ತಿದ್ದೇವೆ. ನಿಮ್ಮ ನಿಷ್ಠೆ, ಪ್ರಾಮಾಣಿಕತೆ, ಜನಾಂಗದ ಅಭಿವೃದ್ಧಿ ಬಗೆಗಿದ್ದ ಕಾಳಜಿ ನಮಗಿಂದೂ ಆಗಿಂದಾಗ್ಗೆ ಮರುಕಳಿಸುತ್ತಿದೆ. ಕುಲದೇವು ನಿಮ್ಮ ಆತ್ಮಕ್ಕೆ ಸದಾ ಚಿರಶಾಂತಿಯನ್ನು ನೀಡಲೆಂಬುದಾಗಿ ಹಾರೈಸುವೆವು.

ಪತ್ನಿ: ಪಾರ್ವತಿ, ಮಗ : ಅನಂತ್ ಕುಮಾರ್, ಸೊಸೆ : ಪ್ರೇಮ ಮತ್ತು ಸಹೋದರ, ಸಹೋದರಿಯರು, ನಾದಿನಿ, ಬಾವಂದಿರು, ಮಕ್ಕಳು, ಅಳಿಯಂದಿರು ಹಾಗೂ ಮೊಮ್ಮಕ್ಕಳು, ಶ್ರೀನಿವಾಸ ನಿಲಯ, ಗಾಳಿಬೀಡು, ಕೊಡಗು.
Ph: 08272/265632

Reg. No. KA/SK/MYS-88 Registered : 10-01-96 TCI Kar. 09592



ದಿನಾಂಕ 29-4-2002 ರಲ್ಲಿ ಸಂಪಾಜೆಯ ನಿಸರ್ಗ ಮಡಿಲಲ್ಲಿ ಸಂಜಯ್ಯ ಮನೆ ಶ್ರೀ ದೇವಿ ಪ್ರಸಾದ್‌ರ 60ನೇ ವರ್ಷದ ಷಷ್ಟ್ಯಬ್ದ ಸಮಾರಂಭದಲ್ಲಿ ಶ್ರೀಶ್ರೀಶ್ರೀಬಾಲ ಗಂಗಾಧರ ನಾಥ ಸ್ವಾಮೀಜಿಯರಿಂದ ಆಶೀರ್ವಚನ ಪಡೆಯುತ್ತಿರುವ ದಂಪತಿಗಳು.

## ಗೌಡ ಜನಾಂಗ (ಹತ್ತು ಕುಟುಂಬ ಹದಿನೆಂಟು ಗೋತ್ರ) ಹಿಂದುಳಿದ ವರ್ಗಗಳ ಪಟ್ಟಿಗೆ ಜಾತಿ ಸರ್ಟಿಫಿಕೇಟ್ ಪಡೆಯಲು ಇದ್ದ ಸಂಕಷ್ಟ ನಿವಾರಣೆ :

ಕರ್ನಾಟಕ ಹಿಂದುಳಿದ ವರ್ಗಗಳ ಆಯೋಗ ಗೌಡ ಜನಾಂಗವನ್ನು ಇತರ ಹಿಂದುಳಿದ ವರ್ಗಗಳ ಪಟ್ಟಿಯಲ್ಲಿ ಸೇರಿಸುವ ಮೂಲಕ ಇದುವರೆಗೆ ವೃತ್ತಿಪರ ಶಿಕ್ಷಣ ಪ್ರವೇಶ ಮತ್ತು ಉದ್ಯೋಗ ಸಂದರ್ಭಗಳಲ್ಲಿ ಜಾತಿ ಸರ್ಟಿಫಿಕೇಟ್ ದೊರೆಯಲು ಇದ್ದ ಅಡಚಣೆ ನಿವಾರಣೆಯಾಗಿದೆ. ಕರ್ನಾಟಕ ರಾಜ್ಯ ಹಿಂದುಳಿದ ವರ್ಗಗಳ ಆಯೋಗ ಕೆ. ಎಸ್. ಸಿ. ಬಿ. ಸಿ., ಎಂಎಸ್ ರಿಪೋರ್ಟ್ 2000-01 ಇದೀಗ ರಾಜ್ಯ ಪತ್ರ (ಗಜೆಟ್) ದಲ್ಲಿ ಪ್ರಕಟಗೊಂಡಿದೆ.

ಗೌಡ ಜಾತಿಯನ್ನು ಒಕ್ಕಲಿಗ ಗೌಡ (Vokkaliga - Gowda) ಎಂದು ನಮೂದಿಸುವಲ್ಲಿ ತಪ್ಪಾಗಿ Gouda ಎಂದು ನಮೂದಿಸಲಾಗಿದ್ದರಿಂದ ದೃಢ ಪತ್ರಿಕೆ ಕೊಡಲು ಹಿಂದೇಟು ಹಾಕುತ್ತಿದ್ದರು. ಈ ಬಗ್ಗೆ ಸಮಾಜದ ವತಿಯಿಂದ ಕರ್ನಾಟಕ ಹಿಂದುಳಿದ ವರ್ಗಗಳ ಆಯೋಗಕ್ಕೆ ಮನವಿ ಸಲ್ಲಿಸಲಾಗಿತ್ತು. ಮಾರ್ಚ್ 2002 ರ ರಾಜ್ಯ ಸರಕಾರದ ಆದೇಶದಲ್ಲಿ ಇದು ಸ್ಪಷ್ಟವಾಗಿ ತಿದ್ದುಪಡಿಯಾಗಿದ್ದು ಗೌಡ ಎಂದೇ ಭಾಗ - ೧ ಪುಟ 1016 ರ ಗಜೆಟ್‌ನಲ್ಲಿ ಪ್ರಕಟವಾಗಿದೆ. ಈ ಆದೇಶವು ಪಶ್ಚಿಮ ಘಟ್ಟದ ಕೊಡಗು, ಸುಳ್ಯ ಇತರ ಸ್ಥಳಗಳಲ್ಲಿರುವ ಹತ್ತು ಕುಟುಂಬ ಹದಿನೆಂಟು ಗೋತ್ರದ ಗೌಡ ಜನಾಂಗಕ್ಕೆ ನೆಮ್ಮದಿಯನ್ನು ನೀಡಿದೆ ಎಂದು ಆಯೋಗದ ತೀರ್ಪನ್ನು ಸ್ವಾಗತಿಸಿರುವ ಸುಳ್ಯದ ಎಂ. ಬಿ ಸದಾಶಿವ ಹರ್ಷ ವ್ಯಕ್ತ ಪಡಿಸಿದ್ದು, ಇದಕ್ಕಾಗಿ ಶ್ರಮಿಸಿದ ಕೆ. ಆರ್. ಚಾಮಯ್ಯ, ಓಂಪ್ರಕಾಶ್, ಪ್ರೊ|| ಪೂಜಾರಿ ಮೊಣ್ಣಪ್ಪ, ಎಂ. ಆರ್. ಬಾಲಕೃಷ್ಣ ಮತ್ತಿತರರಿಗೆ ಸಮಾಜ ಋಣಿಯಾಗಿದೆ ಎಂದು ಅಭಿನಂದಿಸಿದ್ದಾರೆ. ಕೇಂದ್ರದ ಇತರ ಹಿಂದುಳಿದ ಜಾತಿ ಪಟ್ಟಿಯಲ್ಲೂ ಸೇರ್ಪಡೆಗೊಳ್ಳುವಲ್ಲಿ ಪ್ರಯತ್ನ ನಡೆದಿದೆ ಎಂದು ಸಂತಸ ವ್ಯಕ್ತಪಡಿಸಿದ್ದಾರೆ.

ಕೃಪೆ : ಸುದ್ದಿ ಪತ್ರಿಕೆ ಸುಳ್ಯ, ಕಳುಹಿಸಿದವರು : **ಕುರುಂಜಿ ಗಂಗಾಧರ ಗೌಡ**, ಪ್ರಾಚಾರ್ಯರು, ಅರಂತೋಡು.

ವಿ. ಸೂ : ಈ ಮೇಲಿನ ವಿಷಯಕ್ಕೆ ಸಂಬಂಧಿಸಿದಂತೆ ಈ ಹಿಂದೆ ಕೊಡಗು ಸಂಗಾತಿ ಪತ್ರಿಕೆಯಲ್ಲಿ ಪ್ರಕಟಿಸಿ ಗಮನ ಸೆಳೆದಿರುವುದನ್ನು ಸ್ಮರಿಸಬಹುದು.

## : ವಿದೇಶ ಪ್ರಯಾಣಕ್ಕೆ ಶುಭ ಹಾರೈಕೆ :



ಡಾ|| ಪಿ. ಡಿ. ಶಿವಕುಮಾರ್

ಮಡಿಕೇರಿ ನಿವಾಸಿ ಪಟ್ಟಡ ದೇವಯ್ಯ ಅವರ ಪುತ್ರ ಡಾ. ಪಿ. ಡಿ. ಶಿವಕುಮಾರ್ ಅವರು ಮೈಸೂರು ವಿಶ್ವ ವಿದ್ಯಾನಿಲಯದ ಜೈವಿಕ ತಂತ್ರಜ್ಞಾನ ವಿಭಾಗದಲ್ಲಿ (Bio-tech) ಡಾಕ್ಟರೇಟ್ ಪದವಿ ಪಡೆದಿದ್ದು, ಅದೇ ವಿಭಾಗದಲ್ಲಿ ಕಾರ್ಯನಿರ್ವಹಿಸುತ್ತಿದ್ದರು. ಇದೀಗ ಅಮೇರಿಕಾದ ಕನ್ ಸಾಸ್ ಸ್ಟೇಟ್ ಯೂನಿವರ್ಸಿಟಿ (Kansas State University) ಯಲ್ಲಿ ಉನ್ನತ ಸಂಶೋಧನೆ ನಡೆಸಲು ಪೋಸ್ಟ್ ಡಾಕ್ಟರೇಟ್ ಫೆಲೋಶಿಪ್‌ಗೆ (Post Doctorate Fellowship) ಆಯ್ಕೆಯಾಗಿರುತ್ತಾರೆ. ಇದರ ನಿಮಿತ್ತ ಇವರು ತಾ.18-6-2002 ರಂದು ಬೆಂಗಳೂರಿನಿಂದ ಅಮೆರಿಕಾಕ್ಕೆ ತೆರಳಿರುತ್ತಾರೆ. ಇವರಿಗೆ ಶುಭ ಹಾರೈಸುವದರೊಂದಿಗೆ ಇವರ ಪ್ರಯಾಣವು ಸುಖಕರವಾಗಿರಲೆಂದು ಹಾರೆಸುವ,

ಪ್ರಕಟಣೆ : ಅಧ್ಯಕ್ಷರು, ಪಟ್ಟಡ ಕುಟುಂಬಸ್ಥರ ಜೀರ್ಣೋದ್ಧಾರ ಸಂಘ, ಅವಂದೂರು.

**Kodagu Sangathi** Kannada Fortnightly Edited, Published, Printed by **Pattada Sheelamani, 1055c, Doddanna Buildings, Hunsur Road, Hinkal Post, Mysore - 570017. ☎ : 0821/404290.** And Printed at Sri Guru Raghavendra Printers, 489, Devamba Agrahara, K. R. Mohalla, Mysore - 24. ☎ : 0821/431792.